ಮನೆಬೆಳಕು
(ರತ್ನದೀಪ ೧)

ತಂದವರು, ಜೋಶಿ ಶಂಕರರಾಯರು

# ಬಾಳಿನ ಗುಟ್ಟು

ಬರೆದವರು
ಗೌರೀಶ ಕಾಯ್ಕಿಣಿ

ಕನ್ನಡ ಸರಸ್ವತಿ ಭಾಂಡಾಗಾರ, ಧಾರವಾಡ.

ಬೆಲೆ. ೧-೧೨-೦

# ಪರಿವಿಡಿ





---


ಮುದ್ರಕರು :

**ಶ್ರೀ. ಆರ್. ಜಿ. ಹುಕ್ಕೇರಿ**
**ಶ್ರೀ. ಎಸ್. ಎಲ್. ಜೋಶಿ**
**ವಸಂತ ಮುದ್ರಣ, ಧಾರವಾಡ.**

ಪ್ರಕಾಶಕರು :

**ಕೆ. ಗೋವಿಂದರಾಯರು**
**ಧಾರವಾಡ.**

# ಮುನ್ನುಡಿ



ಕನ್ನಡದಲ್ಲಿ ಇದು ಅಪೂರ್ವಗ್ರಂಥ. ಇಂತಹ ಗ್ರಂಥವು ನಮ್ಮಲ್ಲಿ ಬೆಳಕಿಗೆ ಬರುತ್ತಿರುವುದು ಒಂದು ಸುದೈವ. ಏಕೆಂದರೆ ಮನೋವಿಜ್ಞಾನದ ಗ್ರಂಥಗಳು ಕನ್ನಡದಲ್ಲಿ ಕಡಿಮೆ. ಅದರಲ್ಲೂ ಸಮಾಜಶಾಸ್ತ್ರದ ದೃಷ್ಟಿಯಿಂದ ಬರೆದ ಮನೋವಿಜ್ಞಾನದ ಗ್ರಂಥವೆಂದರೆ ನಮ್ಮಲ್ಲಿ ಇದೇ ಮೊದಲನೆಯದು.

ಇದು ಅಮೌಲಿಕ ಗ್ರಂಥವೂ ಅಹುದು ಏಕೆಂದರೆ ಸಂಸಾರವನ್ನು ಸುಖಕರವಾಗಿ ಹೇಗೆ ನಡಸಬೇಕು, ಎಂಬ ಬಾಳಿನ ಗುಟ್ಟನ್ನು ಹೇಳಿಕೊಡುವ ಗುರುವಿಗೆ ಯಾವ ಪ್ರತಿಫಲವನ್ನು ಕೊಟ್ಟರೆ ಉಪಕಾರ ತೀರೀತು ?

ಈ ಗ್ರಂಥದಿಂದ ಜರ್ಮನಿ, ಇಂಗ್ಲಂಡ, ಫ್ರಾನ್ಸ ಮೊದಲಾದ ದೇಶಗಳಲ್ಲಿ ತುಂಬ ಹಿತಕರವಾದ ಪರಿಣಾಮಗಳು ಆಗಿವೆ. ಅಮೇರಿಕೆಯಂತೂ ಇದರಿಂದ ವಿಶೇಷವಾದ ಲಾಭವನ್ನು ಪಡೆದುಕೊಂಡಿದೆ ನಮ್ಮಲ್ಲಿಯೂ ಆ ವಿಚಾರಕಿರಣಗಳು ಮುಂದಮುಂದವಾಗಿ ಬಂದು ಮುಟ್ಟಿರುವುದು ನಿಜ. ಆದರೂ ಎಡ್ಲರನ ಪ್ರತ್ಯಕ್ಷ ಗ್ರಂಥವನ್ನೇ ಕನ್ನಡದಲ್ಲಿ ಓದುವುದಕ್ಕೆ ಸಾಧ್ಯವಿದ್ದಿಲ್ಲ ಇದು **ಶ್ರೀಮಾನ್ ಕ್ಯಾಕಿಣಿ ಗೌರೀಶರಿಂದ** ಸಾಧ್ಯವಾಯ್ತು. ಅದಕ್ಕಾಗಿ ಕನ್ನಡಿಗರು ಅವರನ್ನು ಎಷ್ಟು ಕೊಂಡಾಡಿದರೂ ತೀರದು.

ಬಾಳುವೆ ಮಾಡುವುದಕ್ಕೆ, ಬದುಕುವುದಕ್ಕೆ ವಿಚಾರದ, ಸಂಸ್ಕಾರದ ಅವಶ್ಯಕತೆಯಿದೆ, ಎಂಬ ಅರಿವು ಇದ್ದವರು ನಮ್ಮಲ್ಲಿ ಅಪರೂಪ. ಬದುಕಿದ್ದೇವೆ; ಏಕೆ, ಎಂದರೆ ಸತ್ತಿಲ್ಲ, ಆದ್ದರಿಂದ ! ಹುಡುಗ, ಹುಡುಗೆ ವಯಸ್ಸಿಗೆ ಬಂದರು. ವಯಸ್ಸಿಗೆ ಬಂದರೆಂದು ಮದುವೆಯಾಯ್ತು ! ಮದುವೆಯಾದ ಕಾರಣ ಮಕ್ಕಳಾದುವು. ಮಕ್ಕಳಾದ್ದರಿಂದ ತಂದೆ-ತಾಯ್ತನದ ಹಿರಿಯ ಪಟ್ಟವು ಬಂದಿತು. ಆಯ್ತು; ಜನ್ಮದ ಇತಿಕರ್ತವ್ಯವಾಯ್ತು. ಜೀವನವು ಸಫಲವಾಯ್ತು !

ಪ್ರವಾಹದಲ್ಲಿ ಬಿದ್ದ ಕೊರಡವೂ ಕೊನೆ ಮುಟ್ಟುವುದಿಲ್ಲವೆ? ಅದಕ್ಕೇನು ವಿಚಾರ ಬೇಕಿಲ್ಲ. ವಿವೇಕದ ಅವಶ್ಯಕತೆಯಿಲ್ಲ. ಸಂಸ್ಕಾರ ಪಡೆವ ಕಾರಣವಿಲ್ಲ. ಹೀಗೆಯೆ ಪ್ರವಾಹ–ಪತಿತರಾಗಿ ದಿನಗಳನ್ನು ನೂಕುತ್ತಿರುವ ಕುರುಡು ಬಾಳಿನವರಿಗೂ, ಆ ಕೊರಡಿಗೂ ಏನು ವ್ಯತ್ಯಾಸ ?

ತಿಳುವಳಿಕೆಯೇ ಈ ವ್ಯತ್ಯಾಸ. ತಿಳುವಳಿಕೆಯು ಬಾಳಿನ ದಾರಿಯನ್ನು ತೋರುವ ಬೆಳಕು, ಇದುವೆ ಮನೆ ಬೆಳಕು; ಮನೆ ಮನೆಗಳಿಗೂ ಕಳೆ ತರುವ ಬೆಳಕು. ಇಂತಹ ನಿಜವಾದ ಬೆಳಕನ್ನು ಕೊಡುವ, ಬಾಳಿನ ಸರಿಯಾದ ದಾರಿಯನ್ನು ತೋರುವ ಗ್ರಂಥಗಳು ಕನ್ನಡದಲ್ಲಿ ಬಂದಷ್ಟೂ ಒಳಿತೆ ಇದೆ. ಇಂತಹ ಕೆಲವು ರತ್ನ ದೀಪಗಳನ್ನು ಕನ್ನಡ ಕುಟುಂಬಗಳಿಗೆ ಅರ್ಪಿಸಬೇಕೆಂದಿದ್ದೇವೆ. ಸ್ವೀಕರಿಸಿ ದಯೆಗೆಯ್ಯಬೇಕಾಗಿ ಬೇಡುವ,

ಕೆ ಗೋವಿಂದರಾಯ

ಕನ್ನಡಿಪನ

# ಅರಿಕೆ

ಪ್ರತಿಬಿಂಬವು ತನ್ನ ರೂಪರಚನೆಗಾಗಿ ಮೂಲ ಬಿಂಬದ ಕ್ಷಮೆ ಬೇಡ ಬೇಕಾಗಿಲ್ಲ; ಆದರೆ ಜ್ಞಾನದ ಬೆಳಕಿನಲ್ಲಿ ಒಂದು ಭಾಷೆಯಲ್ಲಿಯ ತತ್ವ-ತಥ್ಯ ಗಳನ್ನು ಇನ್ನೊಂದು ಭಾಷೆಯಲ್ಲಿ ಅನುವಾದಿಸಿ ವಾಚಕರಿಗೆ ಒಪ್ಪಿಸುವ ಕೆಲ ಸವು ಬಿಂಬ ಪ್ರತಿಬಿಂಬಗಳಷ್ಟು ಸಹಜ ಸರಲವಲ್ಲ. ಆದ್ದರಿಂದ ಅನುವಾದಕನು ಓದುಗರಲ್ಲಿ ಒಂದೆರಡು ಮಾತುಗಳನ್ನು ಈ ಸಂಬಂಧದಿಂದ ಅರಿಕೆ ಮಾಡಿ ಕೊಳ್ಳಬೇಕೆಂದಿದ್ದಾರೆ

ಡಾ. ಅಲ್ಫ್ರೆಡ್ ಎಡ್ಲರನ "Science of Living" ಎಂಬ ಅಮೂಲ್ಯ ಗ್ರಂಥವನ್ನು ಇಂದು ನಮ್ಮ ಬಾಂಧವರಿಗೆ ಕನ್ನಡಿಸಿ ಕಾಣಿಕೆಯಾಗಿ ಕೊಡುತ್ತಲಿದ್ದೇವೆ. ಕನ್ನಡದ ಕನ್ನಡಿಯಲ್ಲಿ ಹುರುಳುಗೆಡದಂತೆ ಮೂಲ ಗ್ರಂಥದ ಪಡಿನೆಳಲು ಅದೆಷ್ಟು ಸರಿಯಾಗಿ ಮೂಡಿದೆಯೆಂಬುದನ್ನು ಬಲ್ಲವರು ತಿಳಿದುಹೇಳಬೇಕಾಗಿ ಬಿನ್ನಹ. ಮೂರ್ತ ಕಲ್ಪನೆಗಳ ವ್ಯಾವಹಾರಿಕ ವಾತಾಳಿ ಯನ್ನು ಬಿಟ್ಟು ತಾತ್ವಿಕತೆಯ ತಿಳಿಲಿನ ಪಾತಳಿಯನ್ನೇರಿದಂತೆ ವಿಚಾರದ ಸೂಕ್ಷ್ಮತೆಯೊಂದಿಗೆ ಅದನ್ನು ವ್ಯಕ್ತ ಮಾಡುವ ಭಾಷೆಯ ಸಾಮರ್ಥ್ಯವೂ ಬೆಳೆಯಬೇಕಾಗುತ್ತದೆ. ಒಂದು ದೇಶದ ನಾಣ್ಯವನ್ನು ಇನ್ನೊಂದು ದೇಶದಲ್ಲಿ ಬಳಿಕೆಗಾಗಿ "ಮುರಿದು" ಕೊಳ್ಳುವ ಆರ್ಥಿಕ ತೊಂದರೆಗಿಂತ ಭಾಷಾಭೇದದ ಅರ್ಥದ ತೊಡಕು ಹೆಚ್ಚು ತೊಂದರೆಗೊಳಿಸುತ್ತದೆ. ಮೂಲ ಲೇಖಕನ ಅಭಿ ಪ್ರಾಯದ ಮರ್ಮವನ್ನು ಮೂಲದ ಭಾಷೆಯಲ್ಲಿ ಆತನಿಗೆ ಅನಿಸಿದಂತೆಯೇ ಅನುವಾದಕನು ತಾದಾತ್ಮ್ಯವೃತ್ತಿಯಿಂದ ಅರಗಿಸಿಕೊಳ್ಳಬೇಕಾಗುವುದು. ಆ ಆ ಮೇಲೆ ತನ್ನ ಶಬ್ದಸಿದ್ಧಿಯ ಸಂದಿಗ್ಧ ಸಾಮರ್ಥ್ಯವನ್ನು ನಂಬಿ,ಅದೆಲ್ಲ ತತ್ವ ಪ್ರಪಂಚವನ್ನು ತನ್ನ ಭಾಷೆಯಲ್ಲಿ ಯಥಾರ್ಥತೆಯಿಂದ ರೂಪಾಂತರಿಸಬೇಕು. ಆ ಮೇಲೆ ವಾಚಕರ ಅರ್ಥ ಕ್ಷಮತೆಯ ಮಟ್ಟಿಗೆ ಅದರ ಪ್ರತಿಬಿಂಬವು ತಿರು ಗೊಮ್ಮೆ ಮನಸ್ಸಿನಲ್ಲಿ ಮೂಡಬೇಕು. ಹಲವು ಕಾಜುಗಳೊಳಗಿಂದ ಹಾಯ್ದು

ಕಿರಣಗಳು ಇದ್ದಕ್ಕಿದ್ದಂತೆ ಪರಾವರ್ತನವನ್ನು ಹೊಂದಬಹುದು. ಆದರೆ ಬುದ್ಧಿಯ ಲೋಲಕದೊಳಗಿಂದ ಹಾಯ್ದು ಭಾಷೆಯ ಬಣ್ಣ ಬಣ್ಣದ ಕಾಜಿನೊಳಗಿಂದ ದಾಟಿ ವಾಚಕರ ಚಿತ್ತಭಿತ್ತಿಯ ಮೇಲೆ ಮೂಡಿದ ಅರ್ಥದ ಬಿಂಬವು ತೀರ ಮೂಲದಂತೆಯೇ ಇರುವುದೆಂದು ಒಮ್ಮೆಲೇ ಹೇಳುವುದು ಎದೆಗಾರಿಕೆಯ ಮಾತು.

ಆದ್ದರಿಂದ ಮೂಲದಿಂದ ಅನುವಾದ ಮಾಡುವಾಗ ಅನಿವಾರ್ಯವಾಗಿ ಯಾಂತ್ರಿಕ ಪದ್ಧತಿಯನ್ನು ಬಿಡಬೇಕಾಗಿ ಅನುವಾದಕನು ತಾನು ಅರಗಿಸಿಕೊಂಡ ಅರ್ಥವನ್ನು ತನ್ನ ತಿಳುವಳಿಕೆಯ ಭಟ್ಟಿಯಲ್ಲಿ ಕರಗಿಸಿ ಹೆಚ್ಚು ವಿಸ್ತಾರವಾಗಿ ವಿನ್ಯಾಸದಿಂದ ಕನ್ನಡದಲ್ಲಿ ಎರಕ ಹೊಯ್ದು ಈ ಗ್ರಂಥವನ್ನು ರೂಪಗೊಳಿಸಿದ್ದಾನೆ. ಈ ಸಾಹಸದಲ್ಲಿ ಅವಶ್ಯವಾಗಿ ಲೋಪ ದೋಷಗಳು ತಲೆದೋರಿದ್ದರೆ ಅವುಗಳ ಹೊಣೆಯೆಲ್ಲ ಕೇವಲ ಅನುವಾದಕನದು. ಗೌರವದ ಗುಣಗಳಿದ್ದರೆ ಅವುಗಳ ಹಕ್ಕೆಲ್ಲ ಮೂಲ ಗ್ರಂಥವನ್ನು ಬರೆದ ಮಹನುಭಾವರದು. ಮೂಲ ಲೇಖಕರ ಆಶಯದ ವಿಪರ್ಯಾಸವು ಆಗದಂತೆ ಶಕ್ಯವಿದ್ದಷ್ಟು ಎಚ್ಚರಿಕೆ ಪಡಲಾಗಿದೆ.

ಪರಿಭಾಷೆಯ ಕೊರತೆಗಾಗಿ ಕೆಲವೆಡೆಗಳಲ್ಲಿ ಅಸ್ಪಷ್ಟತೆಯಾಗದಿರುವಂತೆ ಸಾಕಷ್ಟು ವಿವೇಚನೆಯನ್ನು ಮಾಡಲಾಗಿದೆ. ಶಬ್ದಕ್ಕೆ ಪ್ರತಿಶಬ್ದವನ್ನಷ್ಟೇ ಇಟ್ಟು ಭಾಷಾಂತರ ಮಾಡುವ ಹವ್ಯಾಸಕ್ಕೆ ಬೀಳದಿದ್ದರೂ ಕೆಲವೆಡೆಗಳಲ್ಲಿ ಕನ್ನಡ ನುಡಿಯ ಕಟ್ಟಿಗೆ ಒಗ್ಗದಂಥ ಕೃತ್ರಿಮತೆಯೂ ಒಳಸೇರಿರಬಹುದು. ಅನಿವಾರ್ಯವಾದ ಈ ಮಾತನ್ನು ವಾಚಕರು ಕ್ಷಮಿಸಿ ಸಹಿಸಬೇಕಾಗಿ ಬೇಡಿಕೆ ಇದು ಲಲಿತ ಗ್ರಂಥವಲ್ಲ. ಕಾದಂಬರಿಯಲ್ಲ. ಆದರೂ ವಿಚಾರಪೂರ್ವಕವಾಗಿ ಓದಿ ಮುಗಿಸಿದರೆ ಅದು ಜೀವನದಲ್ಲಿ ಲಾಭದಾಯಕವಾಗದೆ ಇರಲಿಕ್ಕಿಲ್ಲವೆಂದು ಹೇಳುವ ಸಾಹಸ ಮಾಡುವೆವು.

ನಮ್ಮ ಕನ್ನಡದ ಅಕ್ಕತಂಗೆಯರು, ಅಣ್ಣತಮ್ಮಂದಿರಿಗೆ ತಮ್ಮ ಬಾಳನ್ನು ತಿದ್ದಿಕೊಳ್ಳಲಿಕ್ಕೂ ಅದನ್ನು ಹೆಚ್ಚು ಉಪಯುಕ್ತವಾಗಿಸಲಿಕ್ಕೂ ಈ ಅಲ್ಪ ಪ್ರಯತ್ನವು ಸಹಾಯಕವಾದರೆ ನಮ್ಮ ಶ್ರಮವು ಸಾರ್ಥಕವಾದಂತೆಯೆ ಸರಿ.

**ಗೌರೀಶ ಕ್ಯಾಯಕಿಣಿ.**

# ಕೊನೆಯ ಮೊದಲ-ಮಾತು.

ಇದನ್ನು ಓದಿ ಮುಗಿಸಿದ ಬಳಿಕ, “ ನಮ್ಮ ಬಾಳಿನ ಅರ್ಥ ಹೇಳುವ ಎಷ್ಟು ಮಹತ್ವದ ಗ್ರಂಥವಿದು!” ಎಂದು ಹಲವರ ಹೃದಯದಿಂದ ಧನ್ಯೋದ್ಗಾರಗಳು ಹೊರಡದೆ ಇರಲಾರವು. ಆದರಂತೆ, “ ಇದರಲ್ಲಿ ಹೊಸತು ಏನಿದೆ? ನಮ್ಮವರಿಗೆ ಇದೆಲ್ಲವೂ ಗೊತ್ತಿತ್ತು. ಒಬ್ಬ ಬಿಳಿಯ ಸಾಹೇಬನು ಬರೆಯುತ್ತಲೆ ಅದಕ್ಕೆ ಇಲ್ಲದ ಮಹತ್ವ ಕೊಟ್ಟು ಹೊಗಳುವವರೆ ಎಲ್ಲ!” ಎಂದು ಉಸಿರುಗರೆವವರೂ ಕೆಲರು ಸಿಕ್ಕಬಹುದು

ಇದೂ ಕೆಲಮಟ್ಟಿಗೆ ಸುಳ್ಳಲ್ಲ. ಏಕೆಂದರೆ ೬-೮ ಸಾವಿರ ವರುಷಗಳ ದೀರ್ಘ ಕಾಲೀನ ಅವ್ಯಾಹತವಾದ ಜೀವನದ ಅನುಭವವು ಭಾರತೀಯರದು. ಇಂಗ್ಲಂಡ, ಜರ್ಮನಿಗಳು ಇದೀಗ ಕಣ್ಣುಬಿಟ್ಟ ಕೂಸುಗಳು. ಗ್ರೀಸ, ರೋಮುಗಳು ಸಹ ನಮ್ಮ ಮುಂದೆ ಕಿರಿಯವೆ. ಮೊದಲು ಹುಟ್ಟಿ ಬೆಳೆದವರಿಗೆ, ಚಿಕ್ಕವರಿಗಿಂತ ಎಷ್ಟೋ ಸಂಗತಿಗಳು ಮೊದಲು ಗೊತ್ತಾಗುವುದು ಸಹವೇ ಇದೆ

ಎಡ್ಲರನು ಕಂಡುಹಿಡಿದ ಕೀಳರಿಮೆ, ಹೆಗ್ಗರಿಮೆಗಳ ತತ್ವವು ನಮ್ಮ ಪುರಾತನರಿಗೆ ಎಂದೊ ಗೊತ್ತಿತ್ತು. ಮಾನವನು, ತಾನು ಕಿರುಕುಳನು; ಕೀಳನು ಎಂಬುದನ್ನು ದಿನಾಲು ನೆನೆದುಕೊಂಡು, ಏಳ್ಗೆಹೊಂದಲು ಹವಣಿಸಬೇಕೆಂದು ಒಂದು ಹಂಚಿಕೆಯನ್ನೂ ಅವರು ಮಾಡಿದ್ದಾರೆ ‘ ಪಾಪೋಽಹಂ....ಪಾಪಾತ್ಮ,’ ಅಥವಾ ‘ ತವ ದಾಸೋಽಹಂ....ದಾಸಸ್ಯ, ದಾಸಸ್ಯ....ದಾಸಸ್ಯ ದಾಸೋಽಹಂ ಎಂದು ದೇವರೆದು ನಿಂತು, ಕೆನ್ನೆಕೆನ್ನೆ ಹೊಡೆದುಕೊಂಡು, ಮೂಗು ತಿಕ್ಕಿ, ‘ ಪರಮಾತ್ಮನೇ, ಈ ಹೀನನೂ ದೀನನೂ ದುರ್ಭಾಗ್ಯನೂ ಆದ ನನ್ನನ್ನು ಉದ್ಧರಿಸು;’ ಎಂದು ಒರಲಿ ಬೇಡಿಕೊಂಬ ವಾಡಿಕೆಯಿದೆ. ತಾನು ಕೀಳನು, ಎಂಬ ಅರಿವಿನ ತೀವ್ರತೆಯನ್ನು ಹೆಚ್ಚಿಸಿ, ಯಾವನೊಬ್ಬನಿಗೆ, ಆ ಕೀಳ್ಮೆಯಿಂದ ಹೊರಬಿದ್ದು ಮಿಗಿಲಾದವನಾಗುವುದಕ್ಕೆ ಹಚ್ಚುವ ಹಂಚಿಕೆಯಿದು. ಇದು ಒಂದು ರೀತಿ. ಆದರೆ ಈ ಕೀಳರಿಮೆಯ ತೀವ್ರಭಾವದರಾಗಿ, ‘ ತಾವು ನಿಜವಾಗಿಯೂ ಕೀಳರು,’ ಎಂದು ಸಂಪೂರ್ಣವಾಗಿ ನಂಬಿ ಬಿಟ್ಟರೆ ಆ ಮಾನವ

ಪ್ರಾಣಿಯ ಉದ್ಧಾರದ ಆಸೆಯೆ ಇಲ್ಲ. ಇಂತಹರೇ ನಿತ್ಯ ತಮೋ ಜೀವಿಗಳು. ಅಂಧಂತಮಸ್ಸಿನಲ್ಲಿ ಇರಲು ಅರ್ಹರು ಇವರಲ್ಲಿ ಆತ್ಮವಿಶ್ವಾಸವೇ ಸಂಪೂರ್ಣವಾಗಿ ನಷ್ಟವಾಗಿರುತ್ತದೆ. ಇಂತಹರು ಜೀವನ್ಮೃತರು.

ಆದರೆ ಕೆಲವೊಂದು ಕೊರತೆ ಅಥವಾ ಅನನುಕೂಲತೆಯ ಮೂಲಕ ತಾನು ಹಿಂಡೆ ಬಿದ್ದಿದ್ದೇನೆ; ಕೀಳನಂತೆ ಆಗಿದ್ದೇನೆ; ಎಂದು ತಿಳಿದವರಿಗೆ ಮಾತ್ರ ಏಳ್ಗೆಯ ಆಸೆಯಿದೆ. ಏಕೆಂದರೆ ಇವರಲ್ಲಿ ಆತ್ಮವಿಶ್ವಾಸವು ಇನ್ನೂ ಜೀವಂತವಿರುತ್ತದೆ. ಮಾನವನ ಏಳ್ಗೆಯ ಅಡಿಗಲ್ಲೆ ಆತ್ಮವಿಶ್ವಾಸ. ಅಥವಾ ಅದು ಮಾನವನ ಬೆನ್ನೆಲುವು ಇದ್ದಂತೆ. ಬೆನ್ನಲುವೆ ಇಲ್ಲವಾದರೆ ಅಂತಹರು ತಮ್ಮ ಕಾಲಮೇಲೆ ತಾವು ನಿಲ್ಲುವುದಾವರೂ ಹೇಗೆ ಸಾಧ್ಯ? ಯಾವನಾದರೂ ಒಬ್ಬ ಮಹಾತ್ಮನೊ, ಅವತಾರಿ ಪುರುಷನೊ ಬಂದು ಇವರನ್ನು ಮೇಲೆ ಎತ್ತಿದರೂ ಆ ಮಹಾಪುರುಷನ ಬೆನ್ನೆಲುವೆ, ಈ ಹೆಣಗಳ ಭಾರದಿಂದ ಮುರಿದು ಹೋಗುವ ಸಂಭವವು ಅದು. ಹತ್ತು ಅವತಾರಗಳಾಗಲಿ, ಹತ್ತರ ಹಲವು ಪಟ್ಟುಗಳಷ್ಟು ಅವತಾರಗಳಾಗಲಿ; ಆದರೂ ಸಾಕಾಗದೆ, ಇವರು ಮತ್ತೂ ಒಂದು ಹೊಸ ಅವತಾರದ ಹಾದಿಯನ್ನು ನೋಡುವುದೇ! ಇದ್ದಲ್ಲೆ ಬಿದ್ದಿರುವುದೆ ಇವರ ಸ್ವಭಾವ. ಇದುವೆ ಇಂತಹರ **ಸನಾತನ** ( ಎಂದರೆ ಯಾವಾಗಲೂ ಇರತಕ್ಕ ) **ಧರ್ಮ!** 'ಪಾಪೋऽಹಂ,' ಅಥವಾ 'ದಾಸೋऽಹಂ' ಎಂಬ ಆತ್ಯಂತಿಕ ಭಾವದ ದುಷ್ಪರಿಣಾಮವು ಇದು.

ತಮ್ಮಲ್ಲಿಯ ಕೊರತೆಗಳು ತಿಳಿಯದಿದ್ದರೆ ಯಾರ ಉನ್ನತಿಯೂ ಆಗಲಾರದು. ಆದುದರಿಂದ ಪ್ರತಿಯೊಬ್ಬರೂ ತಮ್ಮ ಕೊರತೆಗಳನ್ನು ಕಂಡುಕೊಳ್ಳಲೆ ಬೇಕು. ತನ್ನಲ್ಲಿ ಕೊರತೆಗಳಿವೆಯೆಂದರೆ ತಪ್ಪಿಲ್ಲ. ಆದರೆ ತಾನು ಕೀಳನೆಂಬ ಭಾವನೆಯಾದರೆ ಮಾತ್ರ ಅದು ಘಾತಕ. ಅದು ಆತ್ಮಹತ್ಯೆಯೆ. ಈ ಕೀಳರಿಮೆಯು ಲೋಕದಲ್ಲಿ ಎಷ್ಟೊಂದು ಭಯಂಕರವಾದ ಅನರ್ಥಗಳನ್ನು ಮಾಡಿದೆಯೆಂಬುದರ ಅರಿವು—ಎಡ್ಲರನು ತನ್ನ ಸಂಶೋಧನೆಯಿಂದ ಅದರ ದುಷ್ಪರಿಣಾಮಗಳನ್ನು ಸ್ಪಷ್ಟವಾಗಿ ತಿಳಿಸಿ ಕೊಡುವನಕ—ಎಷ್ಟು ಜನಕ್ಕೆ ಇದ್ದಿತು?

ಹೊರಗಿನ ಕೊರತೆ ಹೋಗಬಹುದು, ಕುಂದು ಕಡಿಮೆಯಾಗಬಹುದು. ಆದರೆ ಮೂಲತಃ ಜೀವವೇ ಕೀಳಾಗಿದ್ದರೆ (ಅಥವಾ ತಾನು ಕೀಳೆಂದು ಬಗೆ

ದರೆ) ಅದಕ್ಕೆ ಯಾವ ಔಷಧಿ, ಉಪಚಾರಗಳೂ ಇಲ್ಲ. ಯಾವಾಗಲೂ ಬೆಳೆಯುವುದು ಜೀವದ ಲಕ್ಷಣ. ಉಳಿದ ಪ್ರಾಣಿ ವನಸ್ಪತಿಗಳು ದೇಹದಿಂದ ಬೆಳೆಯುವುವು. ಮಾನವನು ದೇಹದಿಂದಂತೂ ಸರಿಯೆ. ಮನದಿಂದಲೂ ಬೆಳೆಯುವನು. ಈ ತತ್ತ್ವವನ್ನು ಎಡ್ಲರಿಸಿಗಿಂತಲೂ ಮುಂಚೆ ೪೦೦೦ ವರುಷ ಯೋಗೀಶ್ವರ ಯಾಜ್ಞವಲ್ಕ್ಯನೂ ಕಂಡಿದ್ದನು. ತನ್ನ ಇಂದಿನ ಸ್ಥಿತಿಗಿಂತ ನಾಳಿನ ಸ್ಥಿತಿಯು ಉತ್ತಮವಾಗಬೇಕೆಂದು ಬಯಸದವರಾರು ? ಯಾಜ್ಞವಲ್ಕ್ಯನು, ಜೀವಕ್ಕೆ ಸೊನ್ನಗಾರನ ಉಪಮೆಯನ್ನು ಕೊಟ್ಟಿದ್ದಾನೆ. ಸೊನ್ನಗಾರನ ಕೈಯು ದಿನದಿನಕ್ಕೂ ಪಳಗುವುದರಿಂದ ಅವನು ಬರಬರುತ್ತ ಅಂದ ಅಂದದ ಹೊನ್ನ ಒಡವೆಗಳನ್ನು ಮಾಡುವನು. (ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಂ ಉಪಾದಾಯ, ಅನ್ಯತ್ ನವತರಂ ಕಲ್ಯಾಣತರಂ ರೂಪಂ ತನುತೇ.) ಅದರಂತೆ ಈ ಜೀವಾತ್ಮನೂ ಹೊಚ್ಚ ಹೊಸತಾದ ಕಲ್ಯಾಣಕಾರಕವಾದ ರೂಪಗಳನ್ನು ಧರಿಸುವನು. (ಏವಮ್ ಏವ ಅಯಮ್ ಆತ್ಮಾ ಇದಂ ಶರೀರಂ ನಿಹತ್ಯ ಅವಿದ್ಯಾಂ ಗಮಯಿತ್ವಾ ಅನ್ಯತ್ ನವತರಂ ಕಲ್ಯಾಣತರಂ ರೂಪಂ ಕುರುತೇ )

ಹೀಗೆ ಜೀವವು, ಅನುದಿನವೂ ಮಿಗಿಲಾಗುವುದಕ್ಕೇ ಹಂಬಲಿಸುವುದು ನಿಜವಿದ್ದರೆ, ಲೋಕದಲ್ಲಿ ಅನ್ಯಾಯ ಅನೀತಿಗಳು ನಡೆದಿರುವುದೇಕೆ ? ಎಷ್ಟೋ ಜನರು ದಿನದಿನಕ್ಕೂ ಕ್ರೂರರೂ, ನರಾಧಮರೂ ಆಗುತ್ತಿರುವಂತೆ ತೋರುವುದೇಕೆ ? ಯಾಜ್ಞವಲ್ಕ್ಯ ಮತ್ತು ಎಡ್ಲರರ ಉತ್ತರವು ಇದಕ್ಕೆ ಒಂದೇ ತೆರನಾಗಿದೆ. ಯಾರ ಜೀವನದ ಆದರ್ಶವು ಹೇಗೊ ಹಾಗೆಯೆ ಅವರು ಬೆಳೆಯುತ್ತಾರೆ. (ಕಾಮಮಯಃ ಏವ ಅಯಂ ಪುರುಷಃ, ಯಥಾ ಕಾಮಃ ಭವತಿ, ತತ್ ಕರ್ಮ ಕುರುತೇ; ಯತ್ ಕರ್ಮ ಕುರುತೇ, ತತ್ ಅಭಿಸಂಪದ್ಯತೇ.) ನಿಜವಾಗಿಯೂ ಹೀನವೆನಿಸಿದರೆ ಯಾರೂ ಅಂತಹ ಆದರ್ಶವನ್ನು ತಮ್ಮ ಕಣ್ಣ ಎದುರು ಇರಿಸಿಕೊಳ್ಳಲಾರರು; ಅದನ್ನು ಕಣ್ಣೆತ್ತಿ ನೋಡಲಾರರೂ ಕೂಡ. ತಾವು ಹಿಡಿದ ದಾರಿ ಒಳ್ಳಿತ್ತಾದುದು, ತಾವು ಮಾಡುತ್ತಿರುವುದು ಚೆನ್ನು, ಎಂಬ ಭಾವನೆಯಿರುವ ವರೆಗೇ ಯಾವನೊಬ್ಬನು ಯಾವುದೊಂದು ಕೆಲಸದಲ್ಲಿ ತೊಡಗಿರಬಲ್ಲನು. ಆದುದರಿಂದ, ಸುಷ್ಟನಿರಲಿ ಅಥವಾ ದುಷ್ಟನಿರಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಆದರ್ಶ (ಧ್ಯೇಯ)ದ ದಿಕ್ಕಿನಲ್ಲಿ ಮುಂದುವರಿಯುತ್ತಿರುವುದು

ಸುಳ್ಳಲ್ಲ ಸಮಾಜವು, ದುಷ್ಟರೆಂದೂ ನೀಚರೆಂದೂ ಹೇಳುವ ಜನಗಳು ಕೂಡ ತಮ್ಮ ಸ್ವಂತಕ್ಕೆ ತಾವು ಶ್ರೇಷ್ಠರೆಂದೇ ತಿಳಿದುಕೊಂಡಿರುತ್ತಾರೆ. ಮತ್ತು ಅವರು ತಮ್ಮ ದೃಷ್ಟಿಯಿಂದ ಪ್ರಗತಿಯೆಂದು ನಂಬಿರುವ ದಿಕ್ಕಿನಲ್ಲಿ ಮುಂದು ವರಿಯುವುದಕ್ಕಾಗಿ ಎಡೆಬಿಡದೆ ಹೆಣಗಾಡುತ್ತಿರುತ್ತಾರೆ. ತಾವು ಕೈಕೊಂಡ ದಾರಿಯು ತಪ್ಪೆಂದು ತಿಳಿದೊಡನೆ ಆ ದಿಕ್ಕಿನಿಂದ ಮರುಳುವುದಕ್ಕೆ ಆ ಜೀವವು ಹಂಬಲಿಸದೆ ಎಂದೂ ಇರದು. ಈ ಕಾರಣದಿಂದಲೇ ಪ್ರಾಮಾಣಿಕನಾದ ತೀರ ದುರಾಚಾರಿಯಾದವನಿಗೂ ಸದ್ಗತಿಯು ಶಕ್ಯವಿದೆಯೆಂದು ಗೀತೆಯು ಹೇಳುತ್ತದೆ. ಯಾರು ಯಾರು, ಆವಾವುದರ ಬೆಂಬತ್ತುವರೋ, ಅವರವರಿಗೆ ಅದು ದೊರೆಯುವುದು; ಯಾರ ಶ್ರದ್ಧೆ ಎಂತಹದೋ, ಅಂತಹದೆ ಅವರ ಫಲ; ಎಂದು ಹೇಳುವ ಗೀತೆಯೂ ಮೇಲಣ ವಿಚಾರಕ್ಕೇ ಪುಷ್ಟಿಯನ್ನು ಕೊಡು ತ್ತದೆ. ಕೆಲರು, 'ತಾವು ಮಾಡುತ್ತಿರುವ ಕೆಲಸವು ಅಲ್ಲದುದು; ಸಲ್ಲದುದು; ಹೊಲ್ಲವಾದುದು; ಆದರೂ ಅನಿವಾರ್ಯವಾಗಿ ಮಾಡಬೇಕಾಗಿದೆ. ಎಂದು ನಿಟ್ಟುಸಿರು ಬಿಟ್ಟು ತಮ್ಮ ಕೃತಿಯ ಬಗ್ಗೆ ಅಸಮ್ಮತಿಯನ್ನು ವ್ಯಕ್ತಪಡಿಸುವರು. ಇವರೆ, ಮುಂದಿನ ಇನ್ನೊಂದು ಮಾತಿನಲ್ಲಿ "ಅಲ್ಲದೆ ಕೈಕೊಂಡ ಕೆಲಸವು, ಸದೋಷಂ ಅಪಿ ನ ತ್ಯಜೇತ್ ಎಂದು ಕೃಷ್ಣನೇ ಹೇಳಿಲ್ಲವೇ ?" ಎಂದು ಕೇಳುವರು ! ಆದ್ದರಿಂದ ಈ ಜಾತಿಯ ಜನಗಳು ತಮ್ಮ ನಡೆವಳಿಗೆ ಒಯ್ದು ಕೊಂಬುದು ಕೇವಲ ಮೇಲ್ತೋರಿಕೆಗಾಗಿ; ಜನ ನಿಂದೆಯ ಉಗ್ರತೆಯನ್ನು ಕಡಿಮೆ ಮಾಡಿಕೊಳ್ಳುವುದಕ್ಕಾಗಿ. ನಿಜವಾಗಿಯು ಅವರಿಗೆ ತಮ್ಮ ನಡೆಯು ಹೇಸಿಕೆ ಬಂದಿದ್ದರೆ, ಅವರು 'ಹಿಂದೆ ಆದುದು ಆಗಿ ಹೋಯ್ತು ಇನ್ನಾ ದರೂ ತಮ್ಮಿಂದ ಅಕೃತ್ಯವು ಆಗುವುದು ಬೇಡ, ಎಂದು ನಿರ್ಧರಿಸಿ ಹೊಸದಾರಿ ಯನ್ನು ಹಿಡಿಯುತ್ತಿದ್ದರು. ಹೆರವರು ಹೀಯಾಳಿಸುತ್ತಿದ್ದರೂ, ಮಾಡುವವ ರಿಗೆ ಅದು ಸರಿಯೆನಿಸುತ್ತಿದ್ದುದರಿಂದಲೆ ಅವರು ಅದರಲ್ಲಿ ತೊಡಗಿರುತ್ತಾರೆ. ಮತ್ತು ಅದರಲ್ಲಿ ಮುಂದುವರಿಯುತ್ತಲೂ ಸಾಗಿರುತ್ತಾರೆ. ಈ ದೃಷ್ಟಿಯಿಂದ 'ಸ್ವೇ, ಸ್ವೇ ಕರ್ಮಣ್ಯಾಭಿರತಃ ಸಂಸಿದ್ಧಿಂ ಲಭತೇ ನರಃ ಎಂಬುದು ಸಂಪೂರ್ಣ ಸತ್ಯ. ಯಾಜ್ಞವಲ್ಕ್ಯ, ಕೃಷ್ಣರು ಎಲ್ಲರಿಗೆ ಮೊದಲೆ ಈ ಸತ್ಯವನ್ನು ಜಗ ತ್ತಿಗೆ ಸಾರಿದ್ದಾರೆ. ಪ್ರತಿಯೊಬ್ಬರೂ ತಮಗೆ ಸರಿ ಎನಿಸಿದ ದಿಕ್ಕಿನಲ್ಲಿ ಬೆಳೆ ಯುತ್ತಿರುತ್ತಾರೆ. ಏಳ್ಗೆಯನ್ನು ಹೊಂದುತ್ತಿರುತ್ತಾರೆ.

ಏಳ್ಗೆ ಹೊಂದುವುದಕ್ಕೆ ಆಗದಿದ್ದವರು ಕೀಳರಿಮೆಯಲ್ಲಿ ಕೊಳೆಯುತ್ತ ನಾಯಬಾಳಿನವರಾಗಿ ದಿನಗಳೆಯುವರು. ಅತ್ತಿಯ ಹಣ್ಣಿನಲ್ಲಿರುವಂತೆ ಈ ಭೂಗೋಳದೊಳಗಿನ ಪುಳುಗಳು—'ಪುಳುಮಾನಸರು' ಎಂದು ಪಂಪನು ಹೆಸರಿಟ್ಟ ಜನಗಳಿರುವರು. ಹಳಬರ ಮಾತಿನಲ್ಲಿ ಹೇಳುವುದಾದರೆ ಇದುವೆ ನರಕದಲ್ಲಿ ಕೊಳೆವ ಜೀವರಾಶಿ. ನಿಜವಾದ ಏಳ್ಗೆಯ ದಾರಿಯನ್ನು ಹಿಡಿವ ಎದೆಗಾರಿಕೆಯಿಲ್ಲ; ಆದರೂ ಕೀಳರಿಮೆಯಲ್ಲೂ ಕೊಳೆವ ಇಚ್ಛೆಯಿಲ್ಲ. ಇಂತಹ ಹಲವು ಜನಗಳು ಸುಖವಾಗಿ ಬಾಳಬೇಕೆಂದು ಒಂದು ಹಂಚಿಕೆಯನ್ನು ಹುಡುಕಿಕೊಂಡಿದ್ದಾರೆ. ಇಂತಹರು ತಮ್ಮ ಕೀಳರಿಮೆಯನ್ನ ಒದಲಿಸಿಕೊಂಡು, ಅದನ್ನು ತಿರುವು ಮುರುವು ಮಾಡುವರು. 'ತಾವೇನು ಸಾಮಾನ್ಯರೇ ?' 'ತಮ್ಮಂತೆ ಇನ್ನಾರುಂಟು.' ಎಂಬೀ ಒಗೆಯ ವಿಚಾರಗಳನ್ನೇ ಪ್ರಬಲ ಮಾಡಿಕೊಂಡು. ನಾವು ಹಿರಿದಾದವರು, 'ಹೆಗ್ಗರು' ಎಂದು ನೆರೆನಂಬ ಹತ್ತುವರು. ಆ ಉಬ್ಬಿನಿಂದ ನಡೆವರು; ನುಡಿವರು. ತಮ್ಮ ಆ ಹೆಗ್ಗರಿಮೆಗೆ ಬಾಧೆ ಬರದ ಹಾಗೆ ರೇಶಿಮೆ ಹುಳದಂತೆ, ಒಂದು ಅನುಕೂಲ ಪರಿವಾರ ರೂಪಿಯಾದ ವೇಷ್ಟನವನ್ನು ನೇರ್ಪಡಿಸಿಕೊಳ್ಳುವರು. ಆ ವಿಶಿಷ್ಟ ವಾತಾವರಣದಲ್ಲೇ ಇದ್ದುಕೊಂಡು, ತಾನೆ ಇಂದ್ರ, ತಾನೆ ಚಂದ್ರನೆಂಬ ಹೆಮ್ಮೆಯನ್ನು ಹೆಚ್ಚಿಸಿಕೊಂಬುವರು. ತಾನೇ ಪರಬ್ರಹ್ಮನೆಂಬುವರು. ಇದು ಕೀಳರಿಮೆಯ ಇನ್ನೊಂದು ಬದಿ. ಇವೆರಡೂ, ಒಂದೇ ನಾಣ್ಯದ ಎರಡು ಮೈಗಳಿದ್ದಂತೆ. 'ಪಾಪೋಽಹಂ' 'ದಾಸೋಽಹಂ' ಎಂಬ ಭಜನೆಯು ಕೀಳರಿಮೆ ಕುರುಹು ಆಗಿರುವಂತೆ, ತಾನೇ ಪ್ರತ್ಯಕ್ಷ ಪರಮಾತ್ಮನೆಂಬ 'ಸೋಽಹಂ' ಸ್ಮರಣೆಯೂ ಹೆಗ್ಗರಿಮೆಯು ಚಿಹ್ನವಾಗಿದೆ. ನಾಡ ಹೇಡಿಯಾಗಿದ್ದು 'ಸೋಽಹಂ' ಹೇಳುವುದು ಆತ್ಮವಂಚನೆಯ ಪರಮಾವಧಿ. ಆದುದರಿಂದ ಇವೆರಡೂ ತೂಕ ತಪ್ಪಿದ ನುಡಿ; ತಾಳಗೆಟ್ಟ ಮಾತು. ದಿಗ್ಭ್ರಾಂತ ಜೀವನದ ಲಕ್ಷಣ.

ಹೆಗ್ಗರಿಮೆಯಲ್ಲಿ ಎಷ್ಟೊಂದು ಆತ್ಮವಂಚನೆಯಿದೆ, ಎಂಬುದನ್ನು ನಿರೀಕ್ಷಿಸಿದರೆ, ಸೋಜಿಗವೆನಿಸದೆ ಇರದು. ತಾನು ಕೀಳನೆಂಬ ಅರಿವನ್ನು ಮರೆಯಿಸುವುದಕ್ಕೆ ಮಾನವನು ಹೆಗ್ಗರಿಮೆಯ ಮುಸುಕನ್ನು ಹೊದ್ದುಕೊಂಡಿರುತ್ತಾನೆ. ಕೀಳರಿಮೆ ಎಷ್ಟು ತೀವ್ರವೊ ಅಷ್ಟು ಹೆಗ್ಗರಿಮೆಯ ಹೊದಿಕೆ ಹೆಚ್ಚು ದಪ್ಪ ಬೇಕಾಗುತ್ತದೆ. ಇಲ್ಲವಾದರೆ ಕೀಳರಿಮೆಯ ನಡುಕ (ಚಳಿ) ತಾಳಲಾರದೆ ಆ

ಜೀವದ ತೊಳಲಾಟ ಅಸಹ್ಯವಾದೀತು. ಆದುದರಿಂದ ಹೆಗ್ಗರಿಮೆಯು ವಿಶೇಷ ವಾಗಿ ಕಾಣಿಸಿಕೊಂಬಲ್ಲಿ ಕೀಳ್ಮೆಯ ಭಾವನೆಯೂ ಅಷ್ಟೇ ಹೆಚ್ಚಾಗಿ ಇದೆ ಯೆಂದು ಊಹಿಸಲು ಯಾವ ಅಡ್ಡಿಯೂ ಇಲ್ಲ. ತಮ್ಮ ಧರ್ಮವೇ ಜಗತ್ತಿನಲ್ಲಿ ಶ್ರೇಷ್ಠ' ಎಂದು ಬಿಟ್ಟೂ ಬಿಡದೆ ಕೂಗುವವರಿಗೆ, ಅವರ ಧರ್ಮವು ಕಡಿಮೆ ತರಗತಿಯದೆಂಬ ನೋವು, ಎಲ್ಲಿಯೊ ಅವರ ಮನದ ಮೂಲೆಯಲ್ಲಿ ಅವಿತು ಕೊಂಡಿರುತ್ತದೆ. ಹರಸರ್ವೋತ್ತಮ; ಹರಿ ಸರ್ವೋತ್ತಮ; ತಮ್ಮ ಜಾತಿಯೇ ಮಿಗಿಲಾದುದು, ತಾವೇ ಹೆಚ್ಚಿನ ಕುಲದವರು........ಎಂದು ಮುಂತಾಗಿ ಸ್ಥಾಪಿಸುವ ಆವೇಶ, ಆಗ್ರಹಗಳು ಅವರವರ ಕೀಳರಿಮೆಯ ದ್ಯೋತಕಗಳಾಗಿ ಲ್ಲವ ? ಸ್ವರ್ಗದಲ್ಲಾದ ಸಭೆಗೆ ವಿಶೇಷ ಪ್ರತಿನಿಧಿಯಾಗಿ ಹೋಗಿ ಅಲ್ಲಿ ಕಣ್ಣಾರೆ ಕಂಡವೃತ್ತಾಂತದಂತೆ ಪುರಾಣಾಂತರಗಳಲ್ಲಿ ಬಂದಅವತಾರದ ವರ್ಣನೆ ಗಳು, ತಮ್ಮ ಮತ ಅಥವಾ ಧರ್ಮದವ‍ರ ಹೆಗ್ಗರಿಮೆಯ (ಕೀಳರಿಮೆಯ ?) ಒಳ್ಳೆ ಉದಾಹರಣಗಳಾಗಿವೆ ತಮ್ಮ ಮತ (ಧರ್ಮ) ಸ್ಥಾಪಕನು ಇಂತಹ ವಿಶೇಷ ಅವತಾರನೆಂಬ ಹಠವಾದವೂ ಹೆಗ್ಗರಿಮೆಯ ಒಂದು ಬಗೆಯೆ ಆಗಿದೆ. ಮತ (ಧರ್ಮ) ಸ್ಥಾಪಕರು ಅಸಾಮಾನ್ಯ ಮಹಾ ಪುರುಷರೆಂಬುದು ಅವರ ಧೀರೋದಾತ್ತ ಆಚಾರ–ವಿಚಾರಗಳಿಂದಲೇ ಸಿದ್ಧವಾಗುತ್ತಿರುತ್ತದೆ. ಆದರೆ ಅಷ್ಟರಿಂದ ತೃಪ್ತಿ ಯಾರಿಗೇ ? ಜಗತ್ತಿನಲ್ಲಿ ಅವರು ಎಲ್ಲರಿಗಿಂತ ಹೆಚ್ಚಿನವ ರಾಗಬೇಕಲ್ಲ ! ಹಾಗಾಗಬೇಕಾದರೆ ಆ ಸೃಷ್ಟಿಕರ್ತನೇ ಈತನು, ಅಥವಾ ಈತನ ಆಪ್ತನು ಎಂದು ಬಾದರಾಯಣ ಸಂಬಂಧವನ್ನು ಹಚ್ಚಿಕೊಂಡು ಬುದ್ಧಿ ಯನ್ನು ಆ ಭ್ರಾಂತಿಯಲ್ಲಿ ಇರಿಸಿದಾಗಲೇ ಜೀವಕ್ಕೆ ಸಮಾಧಾನವಾಗುವುದು ! ತಾನು ಅಂತಹ ಆ ಪರಮಾತ್ಮನ ಪ್ರಿಯ ಧರ್ಮದ ಅನುಯಾಯಿ ಎಂಬ ಹಿಗ್ಗು ಉಂಟಾಗುವುದು. ಇನ್ನುಳಿದವರ ಮತ(ಧರ್ಮ)ವು ಕೀಳು, ಅವರು ಪತಿತರು, ನರಕಭಾಜನರು ಎಂದು ಮುಂತಾಗಿ ಸಾರಿ ದೂರಲು ಮೈತುಂಬು ವುದು. ತಮ್ಮ ಧನ್ಯತೆಯ ಅಮಲು ಏರುವುದು !

ಕೀಳರಿಮೆಯೇ ಹೆಗ್ಗರಿಮೆಯಾಗಿ ಹೇಗೆ ಮಾರ್ಪಡುವುದು, ಎಂಬು ದನ್ನು ತೋರಿಸುವ ಒಂದು ಸುಂದರವಾದ ಹಳೆ ಕತೆಯಿದೆ: ಒಬ್ಬ ಘನ ವಿದ್ವಾಂಸರಾದ ಜ್ಞಾನಿಗಳು ಒಂದು ದಿನ ತುಂಬ ಮಿಡುಕುತ್ತ ಹೊತ್ತುಕೈಯ ವರಾಗಿ ಕುಳಿತುದನ್ನು ಅವರ ಒರ್ವ ಶಿಷ್ಯನು ಕಂಡನಂತೆ. ಕಂಡು, 'ಪೂಜ್ಯರೇ

ಇವೇನು ತಮಗೆ ಚಿಂತೆ. ನನ್ನ ಸೇವೆಯನ್ನು ಸ್ವೀಕರಿಸಿ ಆ ಚಿಂತೆಯನ್ನು ಕಡಿಮೆ ಮಾಡಿಕೊಳ್ಳಲು ಸಾಧ್ಯವಿದ್ದರೆ ನಾನು ಕೃತಾರ್ಥನೆಂದು ತಿಳಿಯುತ್ತೇನೆ.' ಎಂದು ಪ್ರಾರ್ಥಿಸಿದ. "ಮುಂದಿನ ಜನ್ಮದಲ್ಲಿ ಒಂದು ಹಂದೆಯಾಗಿ ಹುಟ್ಟಲಿರುವೆನೆಂದು ನನಗೆ ಇದೀಗ ತಿಳಿದು ಬಂದಿತು ಆ ಜನ್ಮವನ್ನು ನೀಗಿದ ಮೇಲೆ, ಮತ್ತೆ ನನಗೊಂದು ದಿವ್ಯ ಜನ್ಮವು ಬರುವುದಿದೆ ಆದರೆ ಆ ಹಂದೆಯಾಗಿ ಇರುವುದು ಹೇಗೆ ? ಅಯ್ಯೋ ! ಆ ಹೇಸಿ ಬಾಳೆ ! ಇದಕ್ಕಿನ್ನೇನು ಗತಿ ? ಎಂದು ಚಿಂತಿಸುತ್ತಿದ್ದೇನೆ" ಎಂದರು ಗುರುಗಳು "ಆ ಹಂದೆಯ ಜನ್ಮದೊಳಗಿಂದ ಬೇಗನೆ ಬಿಡುಗಡೆಯನ್ನು ಹೊಂದಲಿಕ್ಕೆ ಏನಾದರೂ ಹಂಚಿಕೆಯಿದ್ದರೆ ನೋಡಿ. ತಮ್ಮ ಅಪ್ಪಣೆಯಂತೆ ನಾನು ನಡೆದುಕೊಳ್ಳುವೆನು." ಶಿಷ್ಯನು ಒರೆದನು. ಗುರುಗಳು ಶಿಷ್ಯನಿಗೆ ತಾವು ಹಂದೆಯಾಗಿ ಹುಟ್ಟಲಿರುವ ಸ್ಥಳ ಕಾಲಗಳನ್ನು ಅರಿತು ಹೇಳಿದರು. ಅಲ್ಲಿಗೆ ಬಂದು ಇಂತಿಂತಹ ಬಣ್ಣದ ಒಂದು ಹಂದಿಯ ಮರಿಯನ್ನು ಕೊಂದು ಬಿಟ್ಟರೆ, ಆ ಹೀನ ಜನ್ಮದೊಳಗಿಂದೊಮ್ಮೆ ಪಾರಾಗುವೆನು, ಎಂದು ತಿಳಿಸಿದರು

ಆ ಮೇರೆಗೆ ಮುಂದೆ ಗುರುಗಳ ಅವಸಾನ ಕಾಲದ ನಂತರ ಆ ಶಿಷ್ಯನು ಹೇಳಿದೆಡೆಗೆ ಸರಿಯಾದ ಹೊತ್ತಿಗೆ ಹೋಗಿ ನೋಡಿದನು. ಅಲ್ಲಿ ಅವರು ತಿಳಿಸಿದಂತಹ ಹಂದಿಯ ಮರಿಯು ಇತ್ತು ಅದನ್ನು ಕೊಲ್ಲುವುದಕ್ಕಾಗಿ ಬಡಿಗೆಯನ್ನು ಎತ್ತಿದೊಡನೆ.ಆ ಮರಿಯು ದೈನ್ಯದಿಂದ ಎದೆ ಕರಗುವಂತೆ ಬೇಡಿಕೊಂಡಿತಂತೆ. "ಎಲಾ ಪುಣ್ಯಾತ್ಮನೇ, ದಯವಿಟ್ಟು ನನ್ನನ್ನು ಬದುಕಗೊಡು. ಕಸ್ತೂರಿಯಂತ ಈ ಕೆಸರೇನು ! ಅದರಲ್ಲಿ ಹೊರಳಾಟದ ಹಿಗ್ಗೇನು ! ನಮ್ಮ ತಾಯ ಅಮೃತದಂತಹ ಹಾಲೇನು ! ನಮ್ಮ ಮೊಗಸಿನ ಕಲ್ಪನೆ ನಿನಗೆಲ್ಲಿಯದು ? ನನ್ನನು ಕೊಂದರೆ, ನಾನು ಈ ಸುಖಕ್ಕೆ ಎರವಾಗಬೇಕಾಗುವುದು. ಕಾರಣ ಕೊಲ್ಲ ಬೇಡಯ್ಯ. ಅವರವರ ಸುಖ ಅವರವರಿಗೆ" ಎಂದು ಬಿನ್ನವಿಸಿತು ! ಕಾಲೇಜಿನಲ್ಲಿದ್ದಾಗ ಸಮಾಜ ಸೇವೆ, ರಾಷ್ಟ್ರ-ಸೇವೆಗಳ ಉಪನ್ಯಾಸ ಮಾಡುವರು; ವಚನ ಕೊಡುವರು. ಮುಂದೆ ತೀರ ವಿಪರೀತವಾಗಿ ನಡದು ಅದರ ಮುಂಡನವನ್ನೂ ಮಾಡುವರು !

ಯಾರು ಯಾರು ಯಾವ ಯಾವ ದಿಕ್ಕಿನಲ್ಲಿ ಸಾಗುವರೊ, ಆ, ಆ ದಿಕ್ಕಿನಲ್ಲಿ ಅವರು, ಅವರು ಮುಂದುವರೆಯುವರು. ' ಎಂಬ ತತ್ವದ ಸತ್ಯತೆಯು

ಅಡಿಗಡಿಗೂ ಅನುಭವಕ್ಕೆ ಬರುತ್ತದೆ. ಆದರೆ ಅನೇಕರಿಗೆ ಮೊದಮೊದಲು ತಾವು ಕೈಕೊಂಡ ದಾರಿಯಾವುದು ಎಂಬ ಅರಿವು ಇರುವುದಿಲ್ಲ ಮೊದಲು ಕೈಗೆ ಬಂದ ಬೇಕಾದ ಬೀಜಗಳನ್ನು ಬಿತ್ತಿ, ಕೊನೆಗೆ ಹಣ್ಣು ಮಾತ್ರ ಸಿಹಿ ದೊರೆಯ ಬೇಕೆಂದು ಹಂಬಲಿಸುವವರೇ ಹೆಚ್ಚು. ಇಂತಹರ ಪಾಲಿಗೆ ಬಾಳಿನಲ್ಲಿ ನಿರಾ ಶೆಯು ತಪ್ಪಿದ್ದಲ್ಲ ಇವರು ತಮಗೆ ಬಂದ ದುರವಸ್ಥೆಗೆ ತಾವೂ ಬಹುಮಟ್ಟಿಗೆ ಹೊಣೆಗಾರರಿದ್ದೇವೆ. ಎಂದು ಒಪ್ಪಿಕೊಳ್ಳಲು ಸಿದ್ಧರಿರುವುದಿಲ್ಲ. ತಪ್ಪಿನ ಎಲ್ಲ ಹೊಣೆಯನ್ನೂ ಇನ್ನೊಬ್ಬರ ಮೇಲೆ ಹೇರುವುದು ಇವರ ಸ್ವಭಾವವಾಗಿ ರುತ್ತದೆ ಪರಿಸ್ಥಿತಿ, ದೈವ, ಕಲಿಯುಗಗಳಂತಹ ಕಾರಣಗಳಂತೂ ನಮ್ಮ ತಪ್ಪಿನ ಎಲ್ಲ ಭಾರವನ್ನೂ ಹೊತ್ತುಕೊಂಡು ನಮ್ಮನ್ನು ಅಪರಾಧದಿಂದ ಮುಕ್ತ ಮಾಡಲಿಕ್ಕೆ ಯಾವಾಗಲೂ ಕೈಕಟ್ಟಿಕೊಂಡು ಬಳಿಯಲ್ಲಿ ನಿಂತಿವೆ. ಕೆಲಸ ಕೆಟ್ಟಿತು. ಅಥವಾ ಕೈಗೂಡಲಿಲ್ಲವಾದರೆ “ವಿಪರೀತ ಪರಿಸ್ಥಿತಿ ! ದೈವ ! ಅಥವಾ ಕಲಿಯುಗದಲ್ಲಿ ಆಗುವುದೇ ಹೀಗೆ !” ಎನ್ನುವರು. ಸರಿಯಾದರೆ ನಾನು ಮಾಡಿದೆ’ ಎಂದು ಹೆಮ್ಮೆಬಟ್ಟು ಹೇಳಿಕೊಳ್ಳಲಿಕ್ಕೂ ಸಿದ್ಧರ !

ಆಧುನಿಕ ಮಾನಸ ಶಾಸ್ತ್ರವಾಗಲಿ, ಸಮಾಜ ಶಾಸ್ತ್ರವಾಗಲಿ ಒಂದು ಮಾತನ್ನು ಒತ್ತಿ ಒತ್ತಿ ಹೇಳುತ್ತಿದೆ: **ಸಮಾಜವನ್ನುಳಿದು ವ್ಯಕ್ತಿಗೆ ಸ್ವತಂತ್ರ ವಾದ ಅಸ್ತಿತ್ವವಿಲ್ಲ.** ಎಡ್ಲರನ ಅಭಿಪ್ರಾಯವನ್ನು ನಮ್ಮ ಹಳೆಯ ಪರಿಭಾಷೆ ಯಲ್ಲಿ ಹೇಳಲು ಅಡ್ಡಿಯಿಲ್ಲವಾದರೆ, ಸಮಾಜಕ್ಕೆ ಉಪಯುಕ್ತವಾಗಿ ಬಾಳದಿರು ವುದೇ ಪಾಪ. ಸಮಾಜದ ಒಂದು ಅಂಗವಾಗಿ ಅದರ ಧಾರಣೆ, ಪೋಷಣೆಗೆ ಅಂಶತಃ ಆದರೂ ಕಾರಣನಾಗಿದ್ದರೆ ಅದುವೆ ಪುಣ್ಯ.

ಇನ್ನು ಇಲ್ಲಿ, ಸಮಾಜ, ಎಂದರೆ ಆವುದು? ಬ್ರಾಹ್ಮಣ, ವೀರಶೈವ, ಮುಸಲ್ಮಾನ, ಕ್ರಿಸ್ತಿ, ವೈದಿಕ, ಅವೈದಿಕ ಎಂದು ಮುಂತಾದುವೊ ? ಛೆಃ ! ಇವು ಪಂಗಡಗಳು ಅಥವಾ ಬಣಗಳು. ಸಮಾಜವಲ್ಲ. ಸಮಾಜವು ಪ್ರಾದೇ ಶಿಕ; ರಾಷ್ಟ್ರೀಯ. ಯಾರು ಏನನ್ನು ಭಜಿಸುವರೇ ಅವರಿಗೆ ಅದೇ ದೊರೆಯುತ್ತ ದೆಂಬುದನ್ನು ಇಲ್ಲಿಯೂ ಮನಗಾಣಬಹುದು. ಬ್ರಾಹ್ಮಣ, ವೀರಶೈವ, ಜೈನ, ಮುಸಲ್ಮಾನ, ಕ್ರಿಸ್ತಿ ಎಂದು ಮುಂತಾಗಿ ಆದ ಬಣಗಳು ಜೀವನದಲ್ಲಿ ಧರ್ಮವೇ (?) ಮುಖ್ಯವೆಂಬ ತತ್ವದ ಮೇಲೆ ಅಲ್ಲವೇ ? ಧರ್ಮವೇ ಗುರಿ ಯಾಗಿದ್ದವರ ಸಾಧ್ಯವು, ಪಾರಲೌಕಿಕ ಸೌಖ್ಯವಷ್ಟೆ ? ಇಹಲೋಕದ

ಜಂಜಡದೊಳಗಿಂದ ಬೇಗನೆ ಪಾರಾಗಿ ತಮ್ಮ ಜಾತಿಯ ಸ್ವರ್ಗ ಅಥವಾ ಮೋಕ್ಷ ಸುಖವನ್ನು ಪಡೆಯುವುದೇ ಈ ಬಣಗಳ ಜೀವನದ ಇತಿ ಕರ್ತವ್ಯತೆ. (ಸತ್ತ ಮೇಲೆ ಸಹ ಇವರು ಒಂದೆಡೆಗೆ ಹೋಗುವುದಿಲ್ಲ. ಅವರವರ ಜಾತಿಯ ದೇವರೇ ಬೇರೆ ! ಅವರವ ಸ್ವರ್ಗ, ಮೋಕ್ಷ ಸ್ಥಾನಗಳೂ ಬೇರೆ !) ಈ ಬಣಗಳ ದಾರಿ. ಗುರಿ ಕೈಲಾಸ; ವೈಕುಂಠ; ಇಂತು **ಪರಲೋಕ** ! ಸತ್ತ ಮೇಲಣ ಸುಖ! ಹೀಗೆ ಇಹಲೋಕವನ್ನು ಹೀಯಾಳಿಸುವುದು. ಅವನ್ನು ದುರ್ಲಕ್ಷಿಸುವುದು. ಮತ್ತೆ ಐಹಿಕ ಸೌಖ್ಯವಿಲ್ಲ; ಸ್ವರಾಜ್ಯವಿಲ್ಲ; ಸ್ವಾತಂತ್ರ್ಯವಿಲ್ಲ; ಎಂದು ಮಿಡುಕುವುದು ಎಲ್ಲಿಯ ನ್ಯಾಯ ? ಈ ಲೋಕದಲ್ಲಿ ಯಾರು ಏನ ಬೇಡುವರೋ ಅವರು ಅದನ್ನು (ತಮ್ಮ ಯೋಗ್ಯತಾನುಸಾರವಾಗಿ) ಪಡೆಯುವರು.

ಇಂಗ್ಲಂಡ ಅಮೇರಿಕೆಯ ಸಮಾಜಗಳು ಇಹದ ಗುರಿಯನ್ನಿಟ್ಟಿವೆ. ಐಹಿಕ ಸೌಖ್ಯವನ್ನು ಪಡೆದಿವೆ: ಪಡೆಯುತ್ತಿವೆ. ಪರಲೋಕದ ಸಾಧನೆಯನ್ನೇ ಜೀವನದ ಗುರಿಯಾಗಿ ಇರಿಸಿಕೊಂಡು ತಮ್ಮ ಹೋಮ-ಹವನ, ಪೂಜೆ-ಪ್ರಾರ್ಥನೆಗಳಲ್ಲಿಯೆ ಮಗ್ನರಾಗಿ, ಅನಿವಾರ್ಯವಾಗಿ ಇಹಲೋಕದಲ್ಲಿ ಇರಬೇಕಾಗಿ ಬಂದ ಈ ಜನ್ಮದ ಪ್ರತಿನಿಮಿಷವೂ ಒಂದು ಸಂಕಟವೆಂದು ಭಾವಿಸಿ, ಸ್ವರ್ಗದ ಕಡೆಗೇ ಕಣ್ಣು ಹಚ್ಚಿಕೊಂಡು ಕುಳಿತವರಿಗೆ ಅವರ ನಾಡಿನ ಆಡಳಿತದ—ಎಂದರೆ ಐಹಿಕ ಕಾರ್ಯಭಾರದ—ತೊಂದರೆಯನ್ನು ತಪ್ಪಿಸಿ, (ಅವರಿಗೆ) ನೆರವಾಗುವುದಕ್ಕೆ ರಕ್ಷಿಸುವುದಕ್ಕೆ ಆ ರಾಷ್ಟ್ರಗಳು (ಇಂಗ್ಲಂಡ, ಅಮೇರಿಕೆ ಮುಂ.) ಪ್ರಪಂಚದಲ್ಲೆಲ್ಲ ಹಬ್ಬಿಕೊಂಡಿವೆ. ಅದಕ್ಕಾಗಿಯೆ ಹೋರಾಡುತ್ತಿವೆ. ಭೂಲೋಕ ಅವರದು. ಪರಲೋಕ ನಮ್ಮದು. ಇಂದು ಅವರಿಗೆ ಸೌಖ್ಯ; ನಮಗೆ ಸೌಖ್ಯ ಸತ್ತ ಮೇಲೆ! ಐಹಿಕ ಸೌಖ್ಯ ಕ್ಷಣಿಕ. ಸತ್ತಮೇಲಿನ ಸುಖಕ್ಕೆ ಕೊನೆಯೇ ಇಲ್ಲ! ಇಲ್ಲಿಯೂ ಕೀಳರಿಮೆ, ಹೆಗ್ಗರಿಮೆ ಯಾದುದನ್ನು ಕಾಣಬಹುದು ?

ಯೋಗೀಶ್ವರ ಯಾಜ್ಞವಲ್ಕ್ಯನು, ಜ್ಞಾನದೊಡನೆ ತನಗೆ ಧನವೂ ಬೇಕೆಂದನು. ಅವೆರಡನ್ನೂ ಆತನು ಪಡೆದುದಕ್ಕೆ ಅವನ ಚರಿತೆಯೆ ಸಾಕ್ಷಿ. ಜ್ಞಾನ-ಕರ್ಮ ಸಮುಚ್ಚಯಕ್ಕೆ ಶ್ರೀ ಕೃಷ್ಣನ ಚರಿತೆಯು ಮಾದರಿಯಾಗಿದೆ. "(೧) ಶ್ರೀಃ, ವಿಜಯಃ, ಭೂತಿಃ, (೨) ಧ್ರುವಾ ನೀತಿಃ" ಇವು ಅರ್ಜುನ ಮತ್ತು ಕೃಷ್ಣರಿದ್ದಲ್ಲಿ ಇದ್ದೇ ಇರತಕ್ಕವುಗಳಂತೆ. ಇಂತಿವು ಅಂದಿನವರ ಆಸೆ, ಆಕಾಂಕ್ಷೆಗಳು. ಧ್ಯೇಯ-ಧೋರಣೆಗಳು. ಅದರಂತೆ ಅವರು ನೀತಿವಂತರೆನಿಸಿದರಲ್ಲದೆ

ಸಿರಿವಂತರೆಂದೂ ಹೆಸರಾದರು. ಭಾರತದಲ್ಲಿ ಬಂಗಾರದ ಹೊಗೆಯುತ್ತಿದ್ದಿತಂತೆ! ಅಂದಿನ ಕಾಲವು ಅದು! ಇಹ–ಪರಗಳೆರಡೂ ಅವರ ಗುರಿ. ಭುಕ್ತಿ-ಮುಕ್ತಿಗಳೆ ಅವರ ಸಾಧ್ಯ.

ಜೀವನವು ಅಖಂಡವಾಗಿದೆ, ಸುಸಂಬದ್ಧವಾಗಿದೆ ಎಂಬುದು ಎಡ್ಲರನ ವಿಚಾರ ಮಂದಿರದ ಇನ್ನೊಂದು ಮಹತ್ವದ ಮೂಲೆಗಲ್ಲು. 'ಈಶಾವಾಸ್ಯಮ್ ಇದಂ ಸರ್ವಂ ಯತ್ ಕಿಂಚ ಜಗತ್ಯಾಂ ಜಗತ್' ಎಂಬ ಉಪನಿಷತ್ತಿನ ಋಷಿಯು ಅದೇ ತತ್ವವನ್ನು ಇನ್ನೂ ಉದಾತ್ತ ರೀತಿಯಲ್ಲಿ ವಿವರಿಸಿದ್ದಾನೆ ಇಹ, ಪರ; ಸಂಸಾರ, ಪರಮಾರ್ಥ; ಎಚ್ಚರ, ಕನಸು; ಪೇಟೆ, ದೇವರಮನೆ; ನಡೆನುಡಿ; ಗಂಡು, ಹೆಣ್ಣು; ಸ್ಪೃಶ್ಯ, ಅಸ್ಪೃಶ್ಯ ಇವೆ ಮೊದಲಾದುವು ಎಲ್ಲವೂ ಪರಸ್ಪರ ಸುಸಂಬದ್ಧ; ಅಖಂಡ; ಪವಿತ್ರ

ಜೀವನವೆಲ್ಲವೂ ಅಖಂಡ; ಸುಸಂಬದ್ಧ; ಪವಿತ್ರ; ಎಂಬ ಭಾವನೆಯು ಅಳಿದು, ನಾನು ಮಾತ್ತು ನನ್ನ ಹತ್ತಿ ಹೊಂದಿದವರು ಮಾತ್ರ ಪವಿತ್ರ, ಶ್ರೇಷ್ಠ. ಉಳಿದವರು ಕೀಳು, ಕನಿಷ್ಠ; ನಾನು ಮಾಡುವುದು ಮಿಗಿಲಾದುದು, ಹೆರವರು ಮಾಡುವುದು ಹೀನವಾದುದು, ಎಂಬೀ ಬಗೆಯ ಭಾವನೆಯು ದೃಢಮೂಲವಾದಂತೆ ಸಮಾಜದಲ್ಲಿ ಒಡಕು ಹೆಚ್ಚಾಗುತ್ತ ನಡೆಯುವುದು. ಬಾಳು ಸಂಕುಚಿತವಾಗುವುದು. ಮರದ ಬೇರು ಕೆಳಗೆ ಕೆಸರಲ್ಲಿರುವುವೆಂದು ಅದಕ್ಕೂ, ಮೇಲಣ ಹೂ ಹಣ್ಣುಗಳಾಗುವ ಅಂದವಾದ ಕೊಂಬೆಗೂ ಸಂಬಂಧವಿಲ್ಲವೆನ್ನಲಾದೀತೆ ? ಬೇರು ಹೊಲಸು, ಅಪವಿತ್ರವೇ ? ಸಮಾಜವು ಒಂದು ಹೆಮ್ಮರ. ಅದರ ಎಲ್ಲ ಅಂಗಗಳೂ ಪರಸ್ಪರಾವಲಂಬಿಯಾಗಿವೆ. ಬಾಳುವುದಕ್ಕೆ ಎಲ್ಲವೂ ಬೇಕಾಗಿವೆ. ಬೇರಿಗೆ ರೋಗ ಹಿಡಿದರೆ, ಹಣ್ಣು ಕಾಯಿಗಳಿಗೂ ಅದರ ದುಷ್ಪರಿಣಾಮಗಳನ್ನು ಅನುಭವಿಸಬೇಕಾಗುತ್ತದೆ. ಹಣ್ಣಿಗೆ ಕಣ್ಣಿಟ್ಟು, ಬೇರನ್ನು ಕಡೆಗಣಿಸಿದರೆ ! ಪರಲೋಕದ ಸೌಖ್ಯವನ್ನು ಆಸಿಸಿ ಇಹವನ್ನು ಮರೆತರೆ ! ಮುಗಿಲ ಹೂವಿಗೆ ಕೈನೀಡಿ, ನಿಂತ ನೆಲದ ಅರಿವು ಇಲ್ಲದವರಾದರೆ ಅವರಂತಹ ಅರೆಮರುಳರು ಇನ್ನಾರು ? ಇಹಪರಗಳು ಪರಸ್ಪರಾದಲಂಬಿಗಳಾಗಿವೆ. ಸುಸಂಬದ್ಧವಾಗಿವೆ. ಒಂದನ್ನು ಬಿಟ್ಟು ಇನ್ನೊಂದನ್ನು ಸಾಧಿಸುವೆನೆಂದು ಗ್ರಹಿಸುವುದು ಶುದ್ಧ ಭ್ರಮೆ.

ಬಾಳು ಹದಗೆಟ್ಟು ಹಾಳಾಗುವುದಕ್ಕೆ ತೀವ್ರವಾದ ಕೀಳರಿಮೆ ಅಥವಾ ಹೆಗ್ಗರಿಮೆಯು ಒಂದು ಮುಖ್ಯವಾದ ಕಾರಣವೆಂದು ಎಡ್ಲರನು ಕಂಡು ಹಿಡಿದುದು ತೀರ ಸರಿಯಾಗಿದೆ. ಇದೊಂದು ಭಯಂಕರವಾದ ಮನೋರೋಗ. ಇದನ್ನು ಹೋಗಲಾಡಿಸಿಕೊಳ್ಳಲು ಹಲವು ಒಳ್ಳೆಯ ಉಪಾಯಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಆವೆಲ್ಲ ಉಪಾಯಗಳನ್ನು ಒಟ್ಟುಗೂಡಿಸಿ, ನಮ್ಮವರು ಒಂದೇ ಮಾತಿನಲ್ಲಿ ಹೇಳುವ ವಾಡಿಕೆಯಿದ್ದಿತು. 'ನಿನ್ನನ್ನು ನೀನು ತಿಳಿ;' '**ತನ್ನ ತಾನು ಅರಿದಡೆ ತನ್ನ ಅರಿವೆ ಗುರು,**' ಎಡ್ಲರನು ಹೇಳಿದುದೂ ಇದಕ್ಕಿಂತ ಬೇರೆ ಏನೂ ಇಲ್ಲ. ಆದರೆ ತನ್ನನ್ನು ತಾನು ತಿಳಿಯುವುದೆಂದರೇನು ? ಅದರ ರೀತಿ ಪದ್ಧತಿಗಳು ಆವುವು ? ಎಂಬುದನ್ನು ಬೇಕಾದವರಿಗೂ ತಿಳಿಯುವಂತೆ ಅದರ ಪ್ರಥಮ ಪಾಠಗಳನ್ನು ವಿವರವಾಗಿ ಬಿಡಿಸಿ ಹೇಳಿದವನು ಎಡ್ಲರನೇ. ಸುಪ್ತ ಚೇತನ (ಸುಷುಮ್ನೆ) ವಿಚಾರದಲ್ಲಿ ನಮ್ಮಲ್ಲಿ ಇನ್ನೂ ಅನೇಕ ಅದ್ಭುತ ಸಂಗತಿಗಳನ್ನು ಕಂಡು ಬರೆದಿಟ್ಟಿದ್ದಾರೆ. ಆದರೆ ಅದು ಇನ್ನೂ ಸಾರ್ವಜನಿಕರ ಸೊತ್ತು ಆಗಿಲ್ಲ. ಅಥವಾ ಆಧುನಿಕ ಪದ್ಧತಿಯ ವಿಮರ್ಶೆ, ಪ್ರಯೋಗಾದಿಗಳ ಕಕ್ಷೆಯಲ್ಲಿ ಇನ್ನೂ ಬಂದಿಲ್ಲ.

ತನ್ನ ತಾನು ಅರಿತರೆ ಆಗಲಿಲ್ಲ. ಇದು ಮೊದಲ ಕೆಲಸವೆಂಬುದು ನಿಜ. ಆದರೆ ಇಷ್ಟಕ್ಕೆ ಬಿಟ್ಟರೆ ಅರಗೆಲಸವಾಗುವುದು ಎಡ್ಲರನು ಹೇಳುವಂತೆ ಪ್ರತಿಯೊಂದು ವ್ಯಕ್ತಿಯೂ ತನ್ನಲ್ಲಿ ಸಾಮಾಜಿಕತೆಯನ್ನು ಹೆಚ್ಚಿಸಿಕೊಳ್ಳುವಲ್ಲಿಯೆ ಅದರ ಜನ್ಮಸಾಫಲ್ಯವಿದೆ. ಕೃತಾರ್ಥತೆಯಿದೆ. **ಸಾಮಾಜಿಕತೆಯು ನಷ್ಟವಾಗಿದ್ದವರು ಮಾನವರೇ ಅಲ್ಲ** ಸಾಮಾಜಿಕತೆ ಎಂದರೆ ವ್ಯಕ್ತಿ ವ್ಯಕ್ತಿಗಳಲ್ಲಿ ಇರುವ ಆತ್ಮೀಯತೆ, ಸ್ನೇಹ ಶಕ್ತಿ. 'ಕೆಳೆ' ಎಂದು ಇದಕ್ಕೇ ಹೆಸರು. ಇದುವೆ ಸಮಾಜದ ಮೂಲಾಧಾರ. ರಾಷ್ಟ್ರಪುರುಷನ ಜೀವಶಕ್ತಿ. ಮಾನವ್ಯದ ಸಾರ.

ರಾಷ್ಟ್ರವು ನಿರ್ಮಾಣವಾಗಬೇಕಾಗಿದ್ದರೆ ಜನಾಂಗವನ್ನೆಲ್ಲ ಒಂದುಗೂಡಿಸುವಷ್ಟು ಅಲ್ಲಿಯ ಸಾಮಾಜಿಕ ಶಕ್ತಿಯು ಪ್ರಬಲವಾದದ್ದಿರಬೇಕು. ರಾಷ್ಟ್ರದ ಅಂಗಾಂಗಗಳಲ್ಲೆಲ್ಲ ಸುಸಂಬದ್ಧತೆ, ದೃಢತೆಯಿರಬೇಕು ಒಂದೊಂದು ಜಾತಿ ಬಣದವರೂ ತಮ್ಮಷ್ಟಕ್ಕೇ ತಾವು ಇದ್ದುಕೊಂಡರೆ, ಅದೊಂದು ಭಿನ್ನ ಭಿನ್ನವಾದ ರಾಷ್ಟ್ರವಾಗಲು ತಡವಿಲ್ಲ ತಾನು–ತನ್ನ ಜಾತಿ (ಧರ್ಮ)– ಅಲ್ಲಿಂದ

ನೆಟ್ಟಗೆ ಸ್ವರ್ಗ ಅಥವಾ ಮೋಕ್ಷ, ಎಂಬ ಈ ಸೋಪಾನ ಪಂಕ್ತಿಯೇ ಈ ವರೆಗಣ ನಮ್ಮ ಕೀಳ್ಮೆಗೆ ಕಾರಣವಾಗಿದೆ. ಇದು ಅಧರ್ಮದ ದಾರಿ, ಎಂಬುದರಲ್ಲೇನೂ ಸಂದೇಹವೆ ಇಲ್ಲ ತಾನು- ತನ್ನ ಮನೆ–ಊರು–ನಾಡು-ಮಾನವ್ಯ ಇದುವೆ ನಿಜವಾದ ದಾರಿ ಸರಿಯಾದ ದಾರಿ ಈ ದಾರಿಯ ಪ್ರೇರಕ ಶಕ್ತಿಯೇ ಕೆಳೆ (ಸಾಮಾಜಿಕತೆ); ಸಖ್ಯ–ಯೋಗ; "ಸರ್ವ ಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ," ಎಂಬುದನ್ನು ಸಾಧಿಸಿರೆ ಇಹ-ಪರ ಎಲ್ಲ ಸೌಖ್ಯಗಳೂ ಕೈಗೂಡುವವೆಂದು ಉಪನಿಷತ್ತು ಹೇಳುತ್ತದೆ. ಸಾಮಾಜಿಕತೆಯು, ವ್ಯಕ್ತಿಯ ವಿಕಾಸಕ್ಕೂ ಎಲ್ಲ ಸುಖಸಾಧನಕ್ಕೂ ಮೂಲ ಕಾರಣವೆಂದು ಹೇಳುವ ಎಡ್ಲರನೂ ಮೇಲಣ ಋಷಿಯ ಮಾತನ್ನೇ ಇನ್ನೊಂದು ತೆರನಾಗಿ ಸಾರಿದ್ದಾನೆ. ರಾಷ್ಟ್ರ—ಮಾನವ ಕುಟುಂಬ ಇದುವೆ 'ಸಹಸ್ರ ಶೀರ್ಷಗಳ ವಿರಾಟ ಪುರುಷ.' ಇದರ ಧ್ಯಾನ, ಧಾರಣೆ, ಆರಾಧನೆಯೆ ಮಾನವನಿಗೆ ಕಲ್ಯಾಣ ಕಾರಕ. ಇದನ್ನು ಮರೆತು ಒಂದು ಬೆರಲೆ ಒಂದು ಕೂದಲೇ, ಒಂದು ಉಗುರೇ ಆಗಿರುವ ತಮ್ಮ ಒಂದು ಜಾತಿ ಅಥವಾ ಬಣವೇ ಸರ್ವಸ್ವ, ಸಂಪೂರ್ಣವೆಂದು ನಂಬಿರುವುದು ಎಷ್ಟು ತಿಳಿಗೇಡಿತನ! ತನ್ನ ಬಣ ಅಥವಾ ಜಾತಿಯ ಹೊರಗಣ ಇನ್ನೂ ಹಲವು ಸು–ಹೃದರನ್ನು ತನ್ನವರನ್ನಾಗಿ ಮಾಡಿಕೊಳ್ಳಲಿಕ್ಕಾಗದವರು ಅಷ್ಟರ ಮಟ್ಟಿಗೆ ತಮ್ಮ ಹೃದಯವು ವಿಕಾಸವಾಗುವುದು ಇನ್ನೂ ಉಳಿದಿದೆಯೆಂದು ತಿಳಿಯಬೇಕು. ವಿರಾಟಪುರುಷನ ದರ್ಶನದ ಯೋಗ್ಯತೆಯು ತಮಗೆ ಬರಲಿಲ್ಲವಲ್ಲ, ಎಂದು ಮಿಡುಕಬೇಕು. ಮತ್ತು ಈ ಕೊರತೆಯನ್ನು ಹೋಗಲಾಡಿಸಲು ಹವಣಿಸಬೇಕು. ಕೆಳೆಯಿದ್ದರೇ ಬಾಳಿಗೆ ಕಳೆ. ನಾಡಿಗೆ ಬೆಳಕು, ಬೆಡಗು.

ಇಂದಿನ ಬಾಲಕರೆ ನಾಳಿನ ನಾಗರಿಕರು. ಚಿಕ್ಕಂದಿನಲ್ಲಿ ಕಲಿತುದೆ, ಆಜನ್ಮ ಉಳಿಯುವದು. ಆದ್ದರಿಂದ ೪-೫ನೆಯ ವಯಸ್ಸಿನೊಳಗಾಗಿ ಮಕ್ಕಳು ಯಾವ ಎರಕದಲ್ಲಿ ಹಾಯುವರೊ ಹಾಗೆ ಅವರ ಮುಂದಿನ ಜೀವನವೆಲ್ಲವೂ ರೂಪಗೊಳ್ಳುವುದೆಂದು ಎಡ್ಲರನು ಕಂಡು ಹಿಡಿದಿದ್ದಾನೆ. ಮೂರು ವರುಷದ ಬುದ್ಧಿ ನೂರು ವರುಷದ ವರೆಗೆ, ಎಂಬ ನಮ್ಮ ಗಾದೆಯಲ್ಲಿ ಎಡ್ಲರನ ಅನುಭವವೇ ಅಡಕವಾಗಿದೆ.

ಈ ಗ್ರಂಥದಲ್ಲಿ ಎಡ್ಲರನು ತನ್ನ ಸೂಕ್ಷ್ಮವಾದ ಅಭ್ಯಾಸ ಪರಿಶ್ರಮಗಳ ಸಾರವನ್ನೆಲ್ಲ ಸಂಗ್ರಹಿಸಿದ್ದಾರೆ. 'ನಮ್ಮ ಪೂರ್ವಜರಿಗೆ ಗೊತ್ತಿಲ್ಲದ್ದನ್ನು ಯಾವುದನ್ನೂ ಎಡ್ಲರನು ಹೇಳಿಲ್ಲ' ಎಂದು ಕೆಲರಿಗೆ ಎನಿಸಬಹುದು. ಅಗ್ನಿರಥ, (ಪುಷ್ಪಕ) ವಿಮಾನ, ಆಕಾಶವಾಣಿ ಮೊದಲಾದುವೆಲ್ಲವೂ ನಮ್ಮ ಪೂರ್ವಜರಿಗೆ ಗೊತ್ತಿದ್ದುವೆಂದು ಗ್ರಹಿಸಿದರೂ ಅವುಗಳಿಂದ ನಾವು ನಮ್ಮ ಇಂದಿನ ಜೀವನವನ್ನು ಮಿಗಿಲಾಗಿಸಿಕೊಳ್ಳಲು ಮಾಡಿಕೊಂಡ ಲಾಭವೇನು ? ನಮ್ಮ ಹಿರಿಯರಿಗೆ ಎಲ್ಲ ಗೊತ್ತಿದ್ದಿತೆಂಬ ದುರಭಿಮಾನವೇ ಅದರಿಂದ ಹೆಚ್ಚುತ್ತಿದ್ದರೆ ಅದು ನಮ್ಮ ಹಾನಿಗೇ ಕಾರಣವಾಗುವುದು. ಗುಣವನ್ನು ಎಲ್ಲಿಂದ ಬಂದರೂ ಸ್ವೀಕರಿಸಬೇಕು; ಆದರಿಸಬೇಕು; ಎಂದು ನಮ್ಮ ಹಿರಿಯರೆ ಹೇಳಿಲ್ಲವೇ ?

ಪ್ರತಿಯೊಬ್ಬ ಸುಶಿಕ್ಷಿತನೂ ಒಮ್ಮೆಯಾದರೂ ಓದಿ, ವಿಚಾರ ವಿಮರ್ಶೆಗಳನ್ನು ನಡಿಸಲು ಅರ್ಹವಾದ ಗ್ರಂಥವಿದು ಇದರೊಳಗಿನ ಮಾತುಗಳನ್ನು ವೇದವಾಕ್ಯವೆಂದು ನಂಬಬೇಕಾಗಿ ಎಡ್ಲರನೂ ಅಪೇಕ್ಷೆಪಡುವುದಿಲ್ಲ. ತನ್ನ ಅನುಭವ ವಿಚಾರಗಳನ್ನು ಜನರ ಮುಂದೆ ಇರಿಸಿದ್ದಾನೆ. ಇನ್ನೂ ಹೆಚ್ಚಿನ ಸಂಶೋಧನ, ವಿಮರ್ಶೆಗಳು ನಡೆದು ಹೊಸ ಸಂಗತಿಗಳು ಬೆಳಕಿಗೆ ಬಂದರೆ ಅವು ಬೇಕಾಗಿವೆ.

ಕೀರ್ತಿಶೇಷನಾದ ಫ್ರಾಯಿಡನು ಮಾನಸಶಾಸ್ತ್ರದ ಈ ಹೊಸ ಹಾದಿಯ ಅಧ್ವರ್ಯುವಾಗಿದ್ದನು. ಎಡ್ಲರನು ಆತನ ಪರಂಪರೆಯಲ್ಲಿಯೆ ಮೊದಲ್ಗೊಂಡವನಾದರೂ ತನ್ನದೊಂದು ವಿಶಿಷ್ಟವಾದ ದೃಷ್ಟಿಕೋನದಿಂದ ಹಲವು ಹೊಸ ಮಾತುಗಳನ್ನು ಕಂಡುಹಿಡಿದು, ಮುಂದೆ ತನ್ನದೊಂದು ಬೇರೆ ಪಂಥವನ್ನು ಸ್ಥಾಪಿಸಿದನು ಚಾಚೂ ಬಿಡದಂತೆ ಗುರುವು ಎಂದುದನ್ನೇ ಎಂದು ಬಾಳುವ ವಾಡಿಕೆಯಿದ್ದರೆ ಆ ನಾಡಿಗರು ಇಷ್ಟೊಂದು ಏಳ್ಗೆಯನ್ನೇ ಎಂದೂ ಹೊಂದುತ್ತಿದ್ದಿಲ್ಲ. ಮೂಲ ಮತಸ್ಥಾಪಕನ ಕೆಲವೊಂದು ಸಿದ್ಧಾಂತಗಳಿಗೆ ಒಪ್ಪಿದರೂ ತನಗೆ ಪ್ರಾಮಾಣಿಕವಾಗಿ ಅನುಭವಕ್ಕೆ ಬಂದ ಸಂಗತಿಗಳನ್ನು ಎದೆಗಾರಿಕೆಯಿಂದ ಲೋಕದ ಎದುರಿಗೆ ಇಡುವ ಪಾಶ್ಚಿಮಾತ್ಯರ ಪದ್ಧತಿಯು ಅನುಕರಣೀಯವಾಗಿದೆ. ಅದರಲ್ಲಿ ಗುರುವಿನ ಅಪಮಾನವಿಲ್ಲ. ಸತ್ಯದ ಉಪಾಸನೆಯೆ ಇದೆ ನಮ್ಮಲ್ಲಿ ಒಬ್ಬ ಆಚಾರ್ಯರೆ, ಇನ್ನಾರು ಹಿರಿಯರೆಂಬವರೆ ಹಾಡಿದ್ದನ್ನೇ ಹಾಡುವ ದಾಸರ ಶರಣ ಪದ್ಧತಿಯು ಶುದ್ಧ ಸತ್ಯದ ಉಪಾಸನೆಗೆ

ಂಡ್ಡ ಅಡ್ಡಿಯನ್ನೆ ತಂದು ಮುಂಬೊಡ್ಡಿದೆ. ಅದರಿಂದಲೆ ನಮ್ಮ ಸಮಾಜವು ಿಗೆ ಇಲ್ಲದೆ ನಿಂತಲ್ಲೇ ನಿಂತುಕೊಂಡಿದೆ. ಬೆಳವಣಿಗೆ ಹೊಂದದೆ ಇರುವುದು, ೀಗವು ಅಂಟಿಕೊಂಡ ಲಕ್ಷಣವು. ಕುಟುಂಬಗಳು—ಸಮಾಜ ಪುರುಷನು ಂದರೆ ರಾಷ್ಟ್ರವು ಪ್ರವರ್ಧಮಾನ ಸ್ಥಿತಿಯಲ್ಲಿ ಇಲ್ಲದಿದ್ದರೆ ಅದಕ್ಕೆ ಆದ ಅನಾ ೀಗ್ಯವೇನೆಂಬುದನ್ನು ಬೇಗನೆ ಅರಿತುಕೊಳ್ಳುವುದು ಅಗತ್ಯವಾಗಿಲ್ಲವೇ ?

ಈ ದೃಷ್ಟಿಯಿಂದ ಪ್ರಸ್ತುತ ಗ್ರಂಥವನ್ನು ಕನ್ನಡಿಗರು ಒಮ್ಮೆಯಾದರೂ ುವರೆಂದು ಹಾರೈಕೆ. ಮೊದಲನೆಯ ಪ್ರಕರಣವು ಮೊದಲ ಓದಿನಲ್ಲಿ ್ಬ ಗಡಚೆನಿಸುವಂತಿದೆ. ಆದರೂ ಪುಸ್ತಕದ ಮುಂದಿನ ಅಧ್ಯಾಯಗಳನ್ನು ಮ್ಮೆ ಪರಿಶೀಲಿಸಿದ ಬಳಿಕ ಮೊದಲನೆಯ ಅಧ್ಯಾಯವನ್ನು ಇನ್ನೊಮ್ಮೆ ಿದರೆ ಅದು ಹೆಚ್ಚು ಉಪಯುಕ್ತವಾದೀತೆಂದು ಸೂಚಿಸಬಹುದಾಗಿದೆ.

ಈ ಒಳ್ಳೆಯ ಪುಸ್ತಕವನ್ನು ನನ್ನ ತರುಣ ಗೆಳೆಯರಾದ ಶ್ರೀಮಾನ್ ಕಿಣಿ ಗೌರೀಶರು ಭಾಷಾಂತರಿಸಿ ಕನ್ನಡಿಗರಿಗೆ ಒಂದು ಮಿಗಿಲಾದ ಸೇವೆ ನ್ನು ಸಲ್ಲಿಸಿದ್ದಾರೆ. ಶ್ರೀಮಾನ್ ಗೌರೀಶರ ವಿದ್ಯಾವ್ಯಾಸಂಗದ ಉತ್ಸಾಹಕ್ಕೆ ತಿಯಿಲ್ಲ. ನಮ್ಮಲ್ಲಿಯೂ ಎಲ್ಲ ಬಗೆಯ ಸಾಹಿತ್ಯವು ನಿರ್ಮಾಣವಾಗಿ, ಡವು ( ನಾಡು ಮತ್ತು ನುಡಿಯು ) ಭಾರತದ ಯಾವ ಪ್ರಾಂತಕ್ಕಿಂತಲೂ ಂದುಳಿಯಬಾರದೆಂಬ ಹಂಬಲವು ಅವರದು. ಇಂತಹ ತರುಣರು ನಮ್ಮ ಡಿನಲ್ಲಿ ಮುಂದೆ ಬಂದಷ್ಟೂ ನಮ್ಮ ನಾಡಿನ ಲಾಭವೇ ಇದೆ. ಶ್ರೀಮಾನ್ ರೀಶರು ತಮ್ಮ ಅಧ್ಯಯನ, ಸ್ಫೂರ್ತಿಗಳ ಲಾಭವನ್ನು ಇನ್ನೂ ಹೆಚ್ಚು ಹೆಚ್ಚಾಗಿ ಡಕ್ಕೆ ಮಾಡಿಕೊಡುವರೆಂದು ಹಾರೈಸುತ್ತೇನೆ. ಈ ಗ್ರಂಥವನ್ನು ಬರೆವ ಶ್ರಮವನ್ನು ವಹಿಸಿದ್ದಕ್ಕಾಗಿ ಅವರನ್ನು ಅಭಿನಂದಿಸದೆ ಇರಲಾರೆ.

ಸಾಧನಕೇರಿ
ಧಾರವಾಡ
೬-೩-೪೩

**ಶಂ. ಬಾ. ಜೋಶಿ**



# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೮ | ೫ | ಅಸಕ್ತಿ | ಆಸಕ್ತಿ |
| ೧೦ | ೨ | ಸಮಾಜ | ಸಾಮಾಜಿಕ |
| ೧೧ | ೯ | ಅಸಕ್ತಿ | ಆಸಕ್ತಿ |
| ೨೦ | ೨೨ | ತನ್ನ ಕೃತ್ಯಗಳು | ( ಈ ಶಬ್ದಗಳನ್ನು ಬಿಟ್ಟು ಓದಬೇಕು ) |
| ೨೮ | ೧೯ | ಗುಪ್ತ | ಸುಪ್ತ |
| ೪೦ | ೨೩ | ತಾರತಮ್ಮ | ತಾರತಮ್ಯ |
| ೪೧ | ೧೮ | ನಿರೀಕ್ಷಿಸು | ನಿರೀಕ್ಷಿಸಿದರೆ |
| ೬೦ | ೨೭ | ಅಶಕ್ತಿ | ಆಸಕ್ತಿ |
| ೭೮ | ೨೫–೨೬ | ಸಂಗಡಿಗತನ್ನ | ಸಂಗಡಿಗರನ್ನೊ |
| ,, | ೨೭–೨೮ | ಕುಟುಂಬವನ್ನು | ಕುಟುಂಬದವರ |
| ೮೭ | ೨೨ | ಅನುವಂಶಿಕ | ಆನುವಂಶಿಕ |
| ೧೧೩ | ೯ | ಮಕ್ಕಳಲ್ಲಿ | ಮಕ್ಕಳು |
| ೧೩೬ | ೬ | (ಕೆಳೆ ಸಾಮಾಜಿಕ ಭಾವನೆ) | ಕೆಳೆ ( ಸಮಾಜಿಕ ಭಾವನೆ) |

# ಬಾಳಿನ ಗುಟ್ಟು

## ೧. ಆದರ್ಶ ಮತ್ತು ಆಚಾರ.

ವ್ಯಕ್ತಿ-ಮನೋವಿಜ್ಞಾನವೆಂದರೇನು ?

ಪ್ರತಿಯೊಂದು ವ್ಯಕ್ತಿಯ ಜೀವನದ ಬುಡದಲ್ಲಿ ಒಂದು ಗೂಢವಾದ ಸೃಜನಪರವಾದ, ರಚನಾತ್ಮಕವಾದ ಶಕ್ತಿಯಿರುತ್ತದೆ. ಇದುವೆ ಕತೃತ್ವ ಶಕ್ತಿ. ಇದನ್ನು ಅರಿತುಕೊಳ್ಳಲು ಮಾಡಿದ ಯತ್ನ-ಯೋಚನೆಗಳೊಳಗಿಂದಲೇ ವ್ಯಕ್ತಿ-ಮನೋವಿಜ್ಞಾನವು ವಿಕಾಸಗೊಂಡಿತು. ತಾನು ಬೆಳೆಯಬೇಕು, ಬಾಳಬೇಕೆಂಬ ಹಂಬಲವಿಲ್ಲದ ಜೀವವುಂಟೇ ? ಇಲ್ಲವೇ ಇಲ್ಲ. ಏಕೆಂದರೆ ಬೆಳೆಯದ್ದು ಜೀವವೇ ಅಲ್ಲ. ಹಲವು ಬಾರಿ ಯತ್ನ ಮಾಡಲಿ, ಹೆಣಗಾಡಲಿ, ಹೋರಾಡಲಿ ಏನೇ ಮಾಡಲಿ ಕೊನೆಗೆ ಗೆಲ್ಲಬೇಕು, ಗಳಿಸಬೇಕು. ಕೃತ ಕಾರ್ಯವಾಗಬೇಕು ಎಂಬ ಕಾಮನೆಯಲ್ಲಿ ಈ ಜೀವನದ ಸಿಸೃಕ್ಷಾ ಶಕ್ತಿಯು ವ್ಯಕ್ತವಾಗುತ್ತದೆ. ಈ ಶಕ್ತಿಯು ಸೋಲು ನೋವುಗಳನ್ನು ಲೆಕ್ಕಿಸುವುದಿಲ್ಲ. ಒಂದು ನಿಟ್ಟಿನಲ್ಲಿ ಒದಗಿದ ಸೋಲುಗಳ ಕುಂದನ್ನು ನೀಗಿಸಿಕೊಳ್ಳಲು ಇನ್ನೊಂದು ನಿಟ್ಟಿನಲ್ಲಿ ಗೆಲುವನ್ನು ಪಡೆಯಲಿಕ್ಕೆ ಹೆಣಗಾಡಲು ಈ ಶಕ್ತಿಯು ಸಿದ್ಧವಾಗಿರುತ್ತದೆ. ಈ ಶಕ್ತಿಯು "ಗುರಿಗಾಣಿ" ಯಾಗಿರುತ್ತದೆ. ಒಂದು ಉದ್ದೇಶ – ಒಂದು ಆದರ್ಶವನ್ನು ಕುರಿತು ಹೆಣಗಾಡುವುದರಲ್ಲಿ ಪರಿಣಾಮಗಾಮಿಯಾಗಿ ಅದು ವ್ಯಕ್ತವಾಗುತ್ತಿರುತ್ತದೆ. ಸಿಸೃಕ್ಷಾ ( ರಚನಾತ್ಮಕ ) ಶಕ್ತಿಯು ಈ ತರದ ಹೆಣಗಾಟದಲ್ಲಿ—ಉದ್ದೇಶ ಪೂರ್ತಿಗಾಗಿ ಸಾಗುವ ಸಾಧನೆಯಲ್ಲಿ, ಪ್ರತಿಯೊಂದು ಶಾರೀರಿಕ ಇಲ್ಲವೆ ಮಾನಸಿಕ ಕ್ರಿಯಾ-ವ್ಯಾಪಾರವನ್ನೂ ತನಗೆ ಸಹಕರಿಸುವಂತೆ ಮಾಡಿಕೊಳ್ಳಲಾಗುತ್ತದೆ. ಇದ

ರಿಂದ ಒಂದು ನೂತು ಕಂಡು ಬರುತ್ತದೆ. ಅದೇನೆಂದರೆ, ಶಾರೀರಿಕ ಚಲನ ವಲನ ಚಟುವಟಿಕೆಗಳನ್ನಾಗಲಿ, ಮಾನಸಿಕ ಅವಸ್ಥೆಗಳನ್ನಾಗಲಿ, ಆ ಆ ವ್ಯಕ್ತಿಯ ಸಮಗ್ರ ವ್ಯಕ್ತಿತ್ವಕ್ಕೆ—ಆತನ ಜೀವನ ವ್ಯಾಪಿಯಾದ ತನ್ನದೇ ಆದ ವಿಶಿಷ್ಟ ಭೂಮಿಕೆಗ-ಹೊಂದಿಸಿಕೊಳ್ಳದೇ, ಸ್ವತಂತ್ರವಾಗಿ ಇಲ್ಲವೆ ನಿರಪೇಕ್ಷ ವಾಗಿ ಅಭ್ಯಾಸಿಸುವದರಲ್ಲಿ ಏನೂ ಹುರುಳಿಲ್ಲ. ಒಂದು ಉದಾಹರಣೆಯನ್ನು ನೋಡೋಣ. ಅಪರಾಧ-ವಿಜ್ಞಾನದಲ್ಲಿ—ಅಂದರೆ ಅಪರಾಧಿಗಳ ಮನಃಸ್ಥಿತಿ ಯನ್ನೂ ಅವರ ವಿಕೃತ ಕಾರ್ಯ ಪ್ರವೃತ್ತಿಯ ಕಾರಣಗಳನ್ನೂ ಅರಿತು ಕೊಳ್ಳುವ ವಿಜ್ಞಾನದಲ್ಲಿ—ಅಪರಾಧಿಗಿಂತ, ಆತನು ಮಾಡಿದ ಅಪರಾಧಧ ಕುರಿತೇ ವಿಶೇಷ ಲಕ್ಷ್ಯಪೂರೈಸುವದರಲ್ಲಿ ಅರ್ಥವಿಲ್ಲ. ಅಪರಾಧಿಯ ವ್ಯಕ್ತಿತ್ವವೇ ನಮಗೆ ಮುಖ್ಯ. ಅಪರಾಧ ಕೃತ್ಯವನ್ನು ಅದೆಷ್ಟೇ ಪರ್ಯಾಲೋಚನೆ ಮಾಡಿ ನೋಡಿದರೂ, ಆ ಕೃತ್ಯವನ್ನು ಅಪರಾಧಿಯಾದ ವ್ಯಕ್ತಿಯ ಜೀವನದಲ್ಲಿಯ ಒಂದು ಸನ್ನಿವೇಶ, ಒಂದು ಘಟನೆಯೆಂದು ನೋಡಿದ ವಿನಾ, ಈ ಕೃತ್ಯದ ಹೊಲ್ಲತನವನ್ನು ಅರಿತುಕೊಳ್ಳಲು ಬರುವಂತಿಲ್ಲ ನಮ್ಮಿಂದ ಜರಗುವ ಒಂದು ಕೃತ್ಯವು ಒಂದು ಸನ್ನಿವೇಶದಲ್ಲಿ ಅಪರಾಧವೆನಿಸಿದರೆ ಇನ್ನೊಂದು ಪ್ರಸಂಗದಲ್ಲಿ ಅದು ಅಪರಾಧವಾಗಲಿಕ್ಕಿಲ್ಲ. ಆದುದರಿಂದ ವೈಯಕ್ತಿಕ ಸಂದರ್ಭವನ್ನು ಅರಿತು ಕೊಳ್ಳುವುದೇ ಮಹತ್ವದ ಸಂಗತಿ. ವೈಯಕ್ತಿಕ ಸಂದರ್ಭವೆಂದರೆ, ಪ್ರತಿ ವ್ಯಕ್ತಿಗೂ ಜೀವನದ ಅಂತಸ್ಥವಾದ ಅಂತಿಮವಾದ ಗುರಿಯಿರುತ್ತದೆ, ಆ ನಿಟ್ಟಿ ನಲ್ಲಿ ನಡೆವ ಆತನ ಎಲ್ಲ ವ್ಯಾಪಾರ ವ್ಯವಹಾರಗಳ ಒಂದು ಗತಿರೇಖೆಯನ್ನೂ ಕಂಡುಕೊಳ್ಳಬಹುದು. ಇಂತಹ ಹಲವಾರು ಘಟನೆಗಳಿ ಬೇರೆ ಬೇರೆ ಕೃತ್ಯ ಗಳ ಹಿಂದೆ ಹುದುಗಿರುವ ಹುರುಳನ್ನು (ಅರ್ಥವನ್ನು) ಅರಿತುಕೊಳ್ಳಲು, ಆ ವ್ಯಕ್ತಿ ಜೀವನದ ಗುರಿಯು ಗೊತ್ತಾಗಲು ಅತ್ಯಂತ ಅವಶ್ಯಕ. ಆಗ ವ್ಯಕ್ತಿಯ ವಿವಿಧ ಚಟುವಟಿಕೆಗಳನ್ನೆಲ್ಲ ಆತನ ಇಡಿಯಾದ ವ್ಯಕ್ತಿತ್ವದ ಅಂಗ—ಅಂಶ ಗಳನ್ನಾಗಿ ನಾವು ನೋಡಬಹುದು. ಅದೇ ರೀತಿಯಲ್ಲಿ ಇಂಥ ವಿವಿಧ ನಡೆ ವಳಿಗಳನ್ನು ಅವಲೋಕಿಸಿದರೆ,—ಅವುಗಳನ್ನು ವ್ಯಕ್ತಿತ್ವ ಪೂರಕವಾದ ಅಂಶ ಗಳೆಂಬ ರೂಪದಲ್ಲಿ ಅಭ್ಯಾಸಿಸಿದರೆ,—ಆಗ ಪೂರ್ಣ ವ್ಯಕ್ತಿತ್ವದ ಕುರಿತು ಮಿಗಿ ಲಾದ ಮನವರಿಕೆಯನ್ನು ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

**ಬೆಳವಣಿಯೇ ಜೀವಂತ ತನದ ಲಕ್ಷಣ.**

ಹೀಗೆ ಮನೋವ್ಯಾಪಾರದ ಘಟನೆಗಳನ್ನೆಲ್ಲ ತಿಳಿಯಬೇಕಾದರೆ ಉದ್ದೇಶ ಪೂರ್ಣತೆಯ ದೃಷ್ಟಿಯು ಅವಶ್ಯ. ಶರೀರದ ಮಟ್ಟಿಗೂ ಇದೇ ದೃಷ್ಟಿಯಿಂದ ಕಾರ್ಯ ನಡೆಯುವುದೆಂಬುದು ಸ್ಪಷ್ಟವಾಗುತ್ತದೆ. ಶರೀರದ ಕೆಲವೊಂದು ವಿವಕ್ಷಿತ ಗುರಿಗಾಗಿಯೇ, ಎಲ್ಲ ಇಂದ್ರಿಯಗಳು ಹೆಣಗುತ್ತಿವೆ, ಒಳಹೊರಗಿನ ಎಲ್ಲ ಇಂದ್ರಿಯಗಳೂ ಸರಿಯಾಗಿ ಬೆಳವಣಿಗೆ ಹೊಂದಿದಾಗಲೆ ಅವಕ್ಕೆ ಸ್ವರೂಪಗಳು ಪ್ರಾಪ್ತವಾಗುತ್ತವೆ. ಈ ಬೆಳವಣಿಗೆಯಾಗದೆ ಇದ್ದಾಗ ಹಲವು ಬಾರಿ ನಮ್ಮ ಅವಯವದ ಕುಂದು ಕೊರತೆ ಹಾಗೆ ಉಳಿದು ಬಿಡುವುದು. ಒಂದಿಲ್ಲೊಂದು ಅಂಥ ಕೊರತೆಯನ್ನು ತುಂಬಿಕೊಳ್ಳಲಿಕ್ಕೆ ಬೇರೊಂದು ಇಂದ್ರಿಯದ ಶಕ್ತಿಯನ್ನು ಬೆಳಸಿ ನ್ಯೂನಗೊಂಡ ಅಂಗದ ಕೆಲಸವನ್ನು ಅದರಿಂದ ಸಾಗಿಸಿಕೊಳ್ಳಲು ನಿಸರ್ಗವು ವಿಶೇಷವಾಗಿ ಪ್ರಯತ್ನಿಸುವುದನ್ನು ನಾವು ಕಾಣುತ್ತೇವೆ. ಮುಂದೋಟವು (ಅಖಂಡ ಗತಿಯು) ಜೀವನದ ಧರ್ಮ. ಮುಂದಡಿ ಜೀವಂತತನದ ಕುರುಹು. ಮತ್ತು ಈ ಮುನ್ನಡೆಯಲ್ಲಿ ಹೊರಗಿನಿಂದ ಯಾವದೇ ಬಗೆಯ ತಡೆಗಳು ಬಂದರೂ ಅವುಗಳೊಡನೆ ತನ್ನ ರೀತಿಯಲ್ಲಿ ಸಾಧ್ಯವಿದ್ದಷ್ಟು ಹೋರಾಡದೇ ಯಾವ ಜೀವಂತ ಪ್ರಾಣಿಯೂ ಒಮ್ಮೆಲೆ ತಲೆವಾಗುವದಿಲ್ಲ. (ಹೇಡಿಗಳ ಮಾತು ಬೇರೆ ಎನ್ನಿ. ಏಕೆಂದರೆ ಅವರು **ಜೀವಂತ** ಪ್ರಾಣಿಗಳೇ ಅಲ್ಲ.)

ಇನ್ನು ಮನೋಜೀವನದ ಕ್ರಮವು ಕೂಡ ಇದೇ ಬಗೆಯಾಗಿ ಶಾರೀರಿಕ ಜೀವನದ ಗತಿಯನ್ನೇ ಹೋಲುತ್ತದೆ. ಪ್ರತಿಯೊಂದು ಮನಸ್ಸಿಗೂ ಒಂದು ಉದ್ದೇಶ ಇಲ್ಲವೇ ಆದರ್ಶವು ಇದ್ದೇ ಇರುತ್ತದೆ. ಇದ್ದ ಸ್ಥಿತಿಯಿಂದ ಆಚೆಗೆ ಮೇಲ್ಮಟ್ಟದಲ್ಲಿರುವುದೇ ಆದರ್ಶ. ತನ್ನ ಇಂದಿನ ಕುಂದು ಕೊರತೆಗಳನ್ನೂ, ತೊಡಕು-ತೊಂದರೆಗಳನ್ನೂ ಮೀರಿ ನಾಳೆ ಒಳ್ಳೆಯ ದಿನಗಳು ಬರುವವೆಂದು ಮೂರ್ತವಾದ ಒಂದು ಗುರಿಯನ್ನು ಮನಸ್ಸು ಸ್ಥಾಪಿಸಿಕೊಳ್ಳುತ್ತದೆ. ಇಂತಹದೊಂದು ಮೂರ್ತವಾದ ಧ್ಯೇಯದ ಮೂಲಕ ವ್ಯಕ್ತಿಯು ತನ್ನ ವರ್ತಮಾನ ದುಃಖಗಳನ್ನು, ಕಷ್ಟಗಳನ್ನು ಮರೆತು ಒಂದು ಬಗೆಯ ವಿಶ್ವಾಸ ಶ್ರದ್ಧೆಯಿಂದ ತಲೆಯೆತ್ತಿ ಮುಂದುವರಿಯುತ್ತಾನೆ. ಏಕೆಂದರೆ ಇಂತಹರ ಮನಸ್ಸಿನಲ್ಲಿ ಭವಿಷ್ಯದ ಯಶವೇ ಮೂಡಿ ನಿಂತಿರುತ್ತದೆ. ಹೀಗೆ ಒಂದು ಆದರ್ಶ ಇಲ್ಲವೇ

ಉದ್ದೇಶದ ಭಾವನೆಯು ಇಲ್ಲದಿದ್ದರೆ ಯಾವದೊಂದು ಬಾಳಿಗೆ-ದಿನದ ನಮ್ಮ ನಡೆವಳಿಗೆ ಏನೂ ಅರ್ಥವೇ ಉಳಿಯುವುದಿಲ್ಲ.

**ಬಾಳಿನ ಮಾದರಿ ಇಲ್ಲವೇ ವ್ಯಕ್ತಿತ್ವದ ಪಡಿಯಚ್ಚು**

ಈ ಉದ್ದೇಶವನ್ನು-ಜೀವನಾದರ್ಶವನ್ನು-ಗೊತ್ತುಪಡಿಸುವ ಕೆಲಸವು ತೀರ ಚಿಕ್ಕಂದಿನ ಸಂಸ್ಕಾರ ಕ್ಷಮವಾದ ತೀರ ಚಿಕ್ಕಂದಿನಲ್ಲಿಯೇ ಆರಂಭವಾಗುತ್ತದೆ. ಒಂದು ತರದ ಬಾಳಿನ ಪಡಿಯಚ್ಚಿನ (ಮಾದರಿಯ ಮೂಲ ಪ್ರತಿಯ) ಹೊಳವು ಶೈಶವಾವಸ್ಥೆಯಲ್ಲಿಯೇ ರೂಪಗೊಳ್ಳಹತ್ತುತ್ತದೆ. ಒಂದು ಮಗು, ಅಶಕ್ತವಾಗಿದ್ದರೆ, ಅದು ತನ್ನ ನ್ಯೂನತೆಯನ್ನು ಮನಗಂಡು ತಾನು ಕೀಳು,-ಬೀಳೆಂತ ಭಾವಿಸಲು ತೊಡಗುತ್ತದೆ. ಇಂಥ ಭಾವನೆಯಿಂದ ತಾಳಲಾರದಂಥ ಒಂದು ಸಂನ್ನಿವೇಶವನ್ನು ಉಂಟುಮಾಡಿಕೊಂಡು ತೊಳಲುತ್ತದೆ. ಈ ಅವಸ್ಥೆಯ ಅಸಹ್ಯತೆಯ ಮೂಲಕ ಕೊನೆಗೆ ಮತ್ತೆ ಅದು ಬೆಳವಣಿಗೆಗಾಗಿ ಯತ್ನಿಸುತ್ತದೆ. ಆ ಮಗು ತನಗಾಗಿ ಕಲ್ಪಿಸಿಕೊಂಡ ಆದರ್ಶದಿಂದ ತೋಚುವ ನಿಟ್ಟಿನಲ್ಲಿಯೇ ಅದರ ಬೆಳವಣಿಗೆಯು ಮುಂದುವರಿಯುತ್ತದೆ. ಈ ಬೆಳವಣಿಗೆಗೆ ಅದರ ಆದರ್ಶವೇ ಪ್ರೇರಕ ಶಕ್ತಿ. ಉಳಿದ ಶಾರೀರಿಕ ಮಾನಸಿಕ ಕೃತ್ಯಗಳು ಗೌಣ. ಆದರೆ ಈ ಆದರ್ಶವು ಹೇಗೆ ನಿಶ್ಚಿತವಾಗುತ್ತದೆ, ಎಂಬುದನ್ನು ಹೇಳುವುದು ಬಿಗಿಯಾಗಿದೆ. ಆದರೂ ಪ್ರತಿಯೊಬ್ಬರಿಗೂ ಒಂದೊಂದು ಆದರ್ಶವಿರುವುದು ಸುಳ್ಳಲ್ಲ. ಚಿಕ್ಕಂದಿನಿಂದಲೂ ಪ್ರತಿಯೊಂದು ವ್ಯಕ್ತಿಯು ಎಲ್ಲ ಚಟುವಟಿಕೆಗಳ ಗತಿಯನ್ನೂ ಅದರ ಆದರ್ಶವೇ ಆಳುತ್ತದೆ. ಈ ಎಳೆಯ ವಯಸ್ಸಿನಲ್ಲಿ ವ್ಯಕ್ತಿಯ ಶಕ್ತಿ ಮತ್ತು ಪ್ರೇರಣೆಗಳ ಬಗ್ಗೆ (ಅದರ ಚಟುವಟಿಕೆಗಳ ಕಾರಣಗಳು ಕಸುವು-ಕೊರತೆಗಳು ಇವೇ ಮುಂತಾದ ಸಂಗತಿಗಳ ಬಗ್ಗೆ) ಇನ್ನೂ ಬಹಳೇ ಕಡಿಮೆ ಸಂಗತಿಗಳು ಗೊತ್ತಾಗಿವೆ. ಮಗುವಿನ ಸ್ವಭಾವ ಧರ್ಮವನ್ನೂ ಅದರ ಜೀವನ ಕಾರ್ಯದ ಮರ್ಮವನ್ನೂ ಸರಿಯಾಗಿ ತಿಳಿದುಕೊಳ್ಳಲು ಇದುವರೆಗೆ ಯಾವದೊಂದು ಗುರುಕೀಲವು (ತಕ್ಕ ಹಂಚಿಕೆಯು) ಸಿಕ್ಕಿಲ್ಲ. ಏಕೆಂದರೆ ಅದರ ಬೆಳವಣಿಗೆಯ ರೀತಿ, ಅದರ ಬಾಳಿನ ಗುಟ್ಟು ತಪ್ಪದೆ ತಿಳಿಯುವುದಕ್ಕೆ ನಿಶ್ಚಿತ ಮಾರ್ಗವಿಲ್ಲ. ಮಗುವಿನ ಜೀವನಾದರ್ಶವನ್ನು (ಉದ್ದೇಶದ ಮಾದರಿಯು) ನಿಶ್ಚಿತವಾಗಿ ಕಂಡುಕೊಳ್ಳುವ ಹಂಚಿಕೆಗಳು ಇನ್ನೂ ಗೊತ್ತಾಗಿಲ್ಲ. ಇಂತಹದೊಂದು ಗುರಿಯು ತೋರಿ ಬಂದ ಮೇಲೆಯೇ ಆ

ವ್ಯಕ್ತಿಯ ಭವಿಷ್ಯವನ್ನು ಇಷ್ಟ ಬಂದಂತೆ ಮಾರ್ಪಡಿಸಲಿಕ್ಕೆ ಯಾವ ಉಪಾಯ ಗಳನ್ನು ಕೈಕೊಳ್ಳಬೇಕೆಂಬುದನ್ನು ನಾವು ಹೇಳಬಹುದು.

ವ್ಯಕ್ತಿತ್ವದ ಬೆಳವಣಿಗೆಯ ಒಂದು ಪಡಿಯಚ್ಚು (ಆದರ್ಶದ ಮಾದರಿ) ರೂಪಗೊಂಡ ಮೇಲೆಯೇ ಪ್ರತಿಯೊಂದು ವ್ಯಕ್ತಿಯ ಬಾಳಿನ ರೀತಿಯು ನಿಶ್ಚಿತ ವಾಗುತ್ತದೆ. ಸಮಾಜದಲ್ಲಿ ಆ ವ್ಯಕ್ತಿಯ ಸ್ಥಾನಮಾನಗಳು ಹೊಸ ಆಪ್ತ ಸಂಬಂಧಗಳು ನಿರ್ದಿಷ್ಟವಾಗುತ್ತವೆ. ವ್ಯಕ್ತಿತ್ವವು ಏಕಮುಖವಾಗುತ್ತದೆ. ಅಂದಿನಿಂದ ವ್ಯಕ್ತಿಯ ಸಂವೇದನೆಗಳು (ಅಂದರೆ ಎನಿಸಿಕೆಗಳು) ಆತನ ಇಲ್ಲವೆ ಆಕೆಯ ಜೀವನಾದರ್ಶದ ದಿಶೆಯಲ್ಲಿಯೇ ಮಾರ್ಪಡುತ್ತವೆ. ಅಂದಿನಿಂದ ಮುಂದೆ ಮಗುವು ಯಾವುದೊಂದು ಪ್ರಸಂಗದಲ್ಲಿಯ ಘಟನೆಗಳನ್ನು ಇದ್ದಂತೆಯೇ ಭಾವಿಸಿಕೊಳ್ಳುವುದಿಲ್ಲ; ತನ್ನದೇ ಆದ ಒಂದು ಎನಿಸಿಕೆಯ ರೀತಿ ಯಲ್ಲಿ (ಸಂವೇದನಾಕ್ರಮದಲ್ಲಿ) ಅದು ಹೊರಗಿನ ಅನುಭವವನ್ನು ಪಡೆಯು ತ್ತಿರುತ್ತದೆ. ಮಗುವು ತನ್ನ ಸ್ವಂತ ಹಿತಸಂಬಂಧಗಳ ಪೂರ್ವಗ್ರಹಿಕೆಗಳೊಳ ಗಿಂದಲೇ ಹೊರಗಿನ ಪ್ರತಿಯೊಂದು ಆಗುಹೋಗುಗಳ ಎನಿಸಿಕೆಗಳನ್ನು (ಸಂವೇದನೆಗಳನ್ನು) ಹೊಂದುತ್ತಿರುತ್ತವೆ.

ಈ ಸಂದರ್ಭದಲ್ಲಿ ಒಂದು ಸೋಜಿಗದ ಸಂಗತಿಯು ಕಂಡು ಬಂದಿದೆ; ಯಾವುದೊಂದು ಅವಯುವವು ಊನವಾಗಿರುವ ಮಕ್ಕಳ ಎಲ್ಲ ಎನಿಕೆ ಮತ್ತು ಎಣಿಕೆಗಳೂ ಆ ವಿಕೃತ ಅವಯುವದ ಕಾರ್ಯ ಧರ್ಮಕ್ಕೆ ಹೊಂದಿಕೊಂಡೇ ಇರುತ್ತವೆ. ಹೊಟ್ಟೆ ಬೇನೆಯ, ಅಥವಾ ಪಚನ ಕೋಶದಲ್ಲಿ ವಿಕೃತಿಯುಳ್ಳ ಶಿಶುವು ತಿನಿಸು ತಿಂಡಿಗಳ ಕುರಿತು ಮಿತಿಮೀರಿದ ಆಸಕ್ತಿಯನ್ನು ತೋರಿಸು ತ್ತದೆ. ಹಾಗೆಯೇ ಕಣ್ಣಿನಲ್ಲಿ ಕುಂದುಳ್ಳ ಶಿಶುವು ಒಡವೆಗಳ ರೂಪ–ನೋಟ ಗಳಲ್ಲಿಯೇ ವ್ಯಗ್ರವಾಗಿರುತ್ತದೆ. ದೃಶ್ಯ ವೈಚಿತ್ರ್ಯ ವೈವಿಧ್ಯಗಳಲ್ಲಿಯೇ ಮಗ್ನ ವಾಗಿರುತ್ತದೆ. ಹೊರಗಿನಿಂದ ಬರುವ ಎನಿಕೆ (ಸಂವೇದನೆ) ಗಳನ್ನೆಲ್ಲ ಹೊಂದಿ ಸಿಕೊಂಡು ಅರ್ಥ ಮಾಡಿಕೊಳ್ಳುವ ತನ್ನದೇ ಆದ ಒಂದು ರೀತಿ ಎಲ್ಲ ವ್ಯಕ್ತಿ ಮಾತ್ರರಲ್ಲೂ ಗೋಚರವಾಗುತ್ತದೆ. ಆದರೆ ಯಾವದೊಂದು ಶಿಶುವಿನ ಶಕ್ತಿ ಯಾವ ನಿಟ್ಟಿನಲ್ಲಿರುತ್ತದೆಂಬುದನ್ನು ಗೊತ್ತುಪಡಿಸಲು, ಆ ಶಿಶುವಿನ ಯಾವ ಅಂಗವು ಊನವಾಗಿದೆಯೆಂಬುದನ್ನಷ್ಟು ಕಂಡು ಹಿಡಿದರೆ ಆಯಿತು, ಎಂದು ಕೆಲರು ಭಾವಿಸಬಹುದು. ಆದರೆ ಈ ಕೆಲಸವು ಅಷ್ಟು ಸುಲಭವಾಗಿಲ್ಲ.

ಏಕೆಂದರೆ ಆ ಶಿಶುವು ತನ್ನ ಅವಯುವದ ವಿಕೃತಿ ಇದ್ದರೂ, ಆ ನ್ಯೂನತೆಯನ್ನು ನಮ್ಮ ನಿಮ್ಮಂಥ ಹೊರಗಿನ ನೋಡುಗರ ಕಣ್ಣಿಗೆ ಸಹಜವಾಗಿ ಬೀಳುವಂತೆ ಅದನ್ನು ತೋರಿಸಿಕೊಳ್ಳುವದಿಲ್ಲ. ಆ ಮಗುವು ತನ್ನ ಊನತೆಯ ಎನಿಕೆ (ಸಂವೇದನೆ) ಗಳನ್ನು ಅನುಭವಿಸುವ ರೀತಿಯೇ ಒಂದು ವಿಶಿಷ್ಟವಾಗಿರುತ್ತದೆ. ಆದುದರಿಂದ ಬರೇ ಹೊರಗೆ ತೋರುವ ವ್ಯಂಗ ವಿಕೃತಿಗಳ ನ್ಯೂನತೆಯು ನಿರೀಕ್ಷಣದಿಂದ ಶಿಶುವಿನ ಸಂವೇದನಾಕ್ರಮದ ಪೂರ್ವಯೋಜನೆಯು ಗೊತ್ತಾಗುವುದಿಲ್ಲ.

ಶಿಶುವಿನ ಪೂರ್ವಯೋಜನೆಯು ಸಾಪೇಕ್ಷವಾಗಿರುತ್ತದೆ. ಈ ವಿಷಯದಲ್ಲಿ ಅದು ನಮ್ಮೆಲ್ಲರನ್ನೇ ಹೋಲುವದು. ನಮ್ಮೊಳಗೆ ಯಾರೂ ನಿರಪೇಕ್ಷವಾದ ಕೇವಲವಾದ ಸತ್ಯವನ್ನು ಅರಿತುಕೊಂಡವರಿಲ್ಲ. ನಮ್ಮ ವಿಜ್ಞಾನವು ಕೂಡ ನಿರಪೇಕ್ಷ ಸತ್ಯದ ಅನುಗ್ರಹವನ್ನು ಪಡೆದಿಲ್ಲ. ಅದು ವ್ಯಾವಹಾರಿಕ ವಿವೇಕದ ಮೇಲೆ ಎನಿಕೆಗಳ ಎಣಿಕೆ (ಲೆಕ್ಕದ) ಮೇಲೆ ನಿಂತಿದೆ. ಈ ಲೆಕ್ಕವು ಹೊರಗಣ ಕಾರ್ಯಕಾರಣಗಳಿಗೆ ಅನುಸರಿಸಿ ಯಾವಾಗಲೂ ಸ್ಥಿತ್ಯಂತರ ಹೊಂದುತ್ತಿರುತ್ತದೆ. ಆತ್ಯಂತಿಕ ಸತ್ಯ, ತ್ರಿಕಾಲಾಬಾಧಿತ ಸತ್ಯವೆಂಬುದು ಇಲ್ಲಿ ಇಲ್ಲ. ದೊಡ್ಡ ತಪ್ಪುಗಳನ್ನು ಹೋಗಲಾಡಿಸಲು, ಅವುಗಳೆಡೆಯಲ್ಲಿ ಅನಿವಾರ್ಯವಾದ ಚಿಕ್ಕ ತಪ್ಪುಗಳನ್ನು ಕಡೆಗಣಿಸಿ, ಮುಂದಡಿಯಿಡುವದರಲ್ಲಿಯೇ ವಿಜ್ಞಾನವು ತೃಪ್ತಿಹೊಂದುತ್ತದೆ. ನಮ್ಮಿಂದ ತಪ್ಪುಗಳು ಆಗದಿರುವುದು ಸಾಧ್ಯವಿಲ್ಲ. ಆದರೆ ಮಹತ್ವದ ಮಾತೇನೆಂದರೆ, ನಮ್ಮ ತಪ್ಪುಗಳನ್ನು ನಾವು ತಿಳಕೊಂಡು ತಿದ್ದಲೂ ಬಲ್ಲೆವು. ಎಳೆವಯಸ್ಸಿನಲ್ಲಿ ನಮ್ಮ ಆದರ್ಶವು (ಬಾಳಿನ ಮಾದರಿಯು) ಇನ್ನೂ ರೂಪಗೊಳ್ಳುತ್ತಿರುವಾಗಲೇ ಇಂತಹ ತಿದ್ದುಪಡೆಯು ಹೆಚ್ಚು ಸುಲಭ. ಆಗ ಹಾಗೆ ತಿದ್ದುವುದು ಉಳಿದಲ್ಲಿ, ಮುಂದೆ ಈ ತಪ್ಪುಗಳನ್ನು ಸರಿಪಡಿಸಬೇಕಾದರೆ, ಈ ತಪ್ಪಿಗೆ ಮೂಲಕಾರಣವಾದ ಮೊದಲಿನ ಎಲ್ಲ ಸನ್ನಿವೇಶಗಳನ್ನೂ ನೆನಪಿಗೆ ತಂದುಕೊಡಬೇಕಾಗುವುದು. ಮಾನಸಿಕ ವಿಕೃತಿಯಿಂದ ಬಳಲುವ ಒರ್ವ ವ್ಯಕ್ತಿಯ ಚಿಕಿತ್ಸೆಮಾಡುವುದಿದೆ ಎನ್ನಿ. ಆಗ ಅವನು ಇಂದಿನ ಜೀವನದಲ್ಲಿ ಮಾಡುತ್ತಿರುವ ಸಾಮಾನ್ಯ ತಪ್ಪುಗಳನ್ನು ಕಂಡುಹಿಡಿಯುವದಿಷ್ಟೇ ಮುಖ್ಯ ಪ್ರಶ್ನೆಯಲ್ಲ; ಈತನ ಕುರಿತು ನಿಜವಾದ ಸಮಸ್ಯೆಯೇನೆಂದರೆ, ಅವನು ಅಂದು ತನ್ನ ಬಾಳಿನ ಮಾದರಿಯು ಮಾರ್ಪಡುತ್ತಿರುವ ಎಳೆವಯಸ್ಸಿನಲ್ಲಿ (ಸಂಸ್ಕಾರ

ಕ್ಷಣ ಕಾಲದಲ್ಲಿ) ಮಾಡಿದ ಮೂಲ ಭೂತವಾದ ತಪ್ಪುಗಳನ್ನು ಈತನ ಅರಿವಿನ ಆಳದೊಳಗಿಂದ ಹುಡುಕಿ ತೆಗೆದು ಬೆಳಕಿಗೆ ತರುವುದು. ಹಾಗೆ ಮಾಡಿದ ನಂತರವೇ ಈ ತಪ್ಪುಗಳನ್ನೂ—ಅವುಗಳಿಂದ ಹದಗೆಟ್ಟು ಹಾಳಾದ ಈತನ ಮಾನಸಿಕ ಜೀವನವನ್ನೂ—ಯೋಗ್ಯವಾದ ಆರೈಕೆ ಉಪಚಾರಗಳಿಂದ ಸರಿಪಡಿಸಿ ಗುಣಪಡಿಸಬಹುದು.

**ಬಟಿ (ತಳಿ)ಯ ಗುಣದ ಸ್ಥಾನವೇನು ?** ವ್ಯಕ್ತಿಮನೋವಿಜ್ಞಾನದ ಬೆಳಕಿನಲ್ಲಿ ನೋಡಿದರೆ, ಬಟಿಯ ಗುಣದ (ಅನುವಂಶಿಕ ಸಂಸ್ಕಾರಗಳ) ಮಹತ್ವವು ಕಡಿಮೆಯಾಗುತ್ತದೆ. ಬಾಲ್ಯದ ಪರಿಸ್ಥಿತಿಯಲ್ಲಿ ಮೈಗೊಳ್ಳುವ ಬಾಳಿನ ಮಾದರಿಯೇ ಮಹತ್ವದ ಸಂಗತಿಯಾಗಿದೆ. ವ್ಯಕ್ತಿಯು ಬಟಿಯಗುಣ–ಶಕ್ತಿಗಳಿಗಿಂತ, ಅಂಥ ಶಕ್ತಿಗಳನ್ನು ಈತನು ಎಳೆವಯಸ್ಸಿನಲ್ಲಿ ಹೇಗೆ ಉಪಯೋಗಿಸಿಕೊಂಡನೆಂಬುವುದೇ ಮುಖ್ಯ ಪ್ರಶ್ನೆಯಾಗುತ್ತದೆ. ಹುಟ್ಟಿನಿಂದ ಬಂದ ಕೆಲವೊಂದು ಲೈಂಗಿಕ ವ್ಯಂಗಗಳಿಗೆ ಆತನ ಬಟಿಯೇ ಕಾರಣವಾಗಿರಬಹುದು. ಆದರೆ ಇಂತಹ ವ್ಯಂಗಗಳ ಮೂಲಕ ತಲೆದೋರಿದ ಅಥವಾ ನೆಲೆಗೊಂಡ ವಿಶಿಷ್ಟವಾದ ತೊಡಕು ತೊಂದರೆಗಳ ಬಿಗುಪನ್ನು ಸಡಲಿಸಿ, ಶಕ್ಯವಿದ್ದರೆ ಪೂರ್ಣ ಸರಿಪಡಿಸಿ ಈ ಶಿಶುವನ್ನು ಆದಷ್ಟು ಅನುಕೂಲವಾದ ಸನ್ನಿವೇಶದಲ್ಲಿ ಇರಿಸುವುದೆ ನಮ್ಮ ಮುಖ್ಯ ಸಮಸ್ಯೆಯಾಗಿದೆ. ಇಂತಹ ಮಗುವಿನ ಯಾವದೊಂದು ವ್ಯಂಗವನ್ನಾಗಲೀ ನ್ಯೂನತೆಯನ್ನಾಗಲೀ ಕಂಡೊಡನೆ ಅದಕ್ಕೆ ಅನುರೂಪವಾಗಿ ಹೇಗೆ ವರ್ತಿಸಬೇಕೆಂಬದನ್ನು ನಾವು ಬಲ್ಲೆವು. ಆದರೆ ಹಲವುಬಾರಿ ಮಗುವಿನಲ್ಲಿ ತಳಿಯ ದೋಷಗಳಾವುವೂ ಕಂಡು ಬರದೆ, ಸಾಕಷ್ಟು ಪೋಷಕವಾದ ಆಹಾರವು ಸಿಗದಿರುವದರ ಮೂಲಕ ಇಲ್ಲವೇ ಎಳೆವಯಸ್ಸಿನಲ್ಲಿ ಆರೈಕೆ–ಜೋಪಾನವು ಸರಿಯಾಗಿ ಆಗದೆ ಹಲವು ತಪ್ಪುತಡೆಗಳು ಆಗಿ ಮುಂದೆ ಆ ಮಗುವಿನ ಜೀವನವು ಅಡ್ಡದಾರಿಗೆ ಹತ್ತಿ ಅದರ ಬಾಳು ಹಾಳಾಗಬಹುದು.

ವ್ಯಂಗವುಳ್ಳ ಅವಯವಗಳೊಂದಿಗೆ ಹುಟ್ಟಿದ ಮಕ್ಕಳ ಬಾಳಿನಲ್ಲಿ ಅವರ ಮಾನಸಿಕ ಸನ್ನಿವೇಶವೇ ಅತ್ಯಂತ ಮಹತ್ವದ್ದಾಗಿದೆ. ಇಂತಹ ಮಕ್ಕಳು ಉಳಿದವರಿಗಿಂತ ಹೆಚ್ಚಿನ ಕಠಿಣ ಪರಿಸ್ಥಿತಿಯ ಮನೋವೇದನೆಗಳ ಅವಸ್ಥೆಯಲ್ಲಿ ಇರುವುದರಿಂದ ಅವರು ಒಂದು ವಿಶೇಷವಾದ ನ್ಯೂನತೆಯ ಎನಿಕೆಯ ನೆನಿಕೆ

ಯನ್ನು (ತಾನು ಇರುವದಕ್ಕಿಂತ ಹೆಚ್ಚು ಕೀಳಾಗಿರುವೆನೆಂಬ ಭಾವನೆಯ ಸ್ಪಷ್ಟವಾದ ಲಕ್ಷಣಗಳನ್ನು) ತೋರ್ಪಡಿಸುವರು. ಅವರ ಬಾಳಿನ ಮಾದರಿಯು (ಭಾವೀ ಆಯುಷ್ಯದ ಪಡಿಯಚ್ಚು) ರೂಪಗೊಳ್ಳುತ್ತಿರುವ ಸಮಯದಲ್ಲಿಯೇ ಇಂತಹರು ಹೆಚ್ಚು ಅಂತರ್ಮುಖಿಯಾಗುವರು; ತನ್ನ ತನುಮನಗಳ ಕುರಿತೇ ಮಿತಿಮೀರಿದ ಅಸಕ್ತಿಯನ್ನು, ಲಕ್ಷ-ದಕ್ಷತೆಯನ್ನೂ ವಹಿಸುವರು. ಇಂತಹರು ತಮ್ಮ ಒಳನೋಟದ ನಿಟ್ಟಿನಲ್ಲಿಯೇ ಮುಂದಿನ ಜೀವನವನ್ನು ಸಾಗಿಸುವರು. ಇಲ್ಲಿ ಒಂದು ಸಂಗತಿಯನ್ನು ಲಕ್ಷ್ಯದಲ್ಲಿಡಬೇಕು: ಮಕ್ಕಳು ತಮ್ಮ ಕಣ್ಣಮುಂದೆ ಇಟ್ಟುಕೊಂಬ ಬಾಳಿನ ಮಾದರಿಯಲ್ಲಿಯ ತಪ್ಪುತಡೆಗಳಿಗೆ, ಕೇವಲ ಶಾರೀರಿಕ ನ್ಯೂನತೆಗಳೇ ಕಾರಣವಲ್ಲ. ಇನ್ನೂ ಕೆಲವು ಬೇರೆ ಸನ್ನಿವೇಶಗಳೂ ಅಂಥ ತಪ್ಪುಗಳಿಗೆ ಕಾರಣವಾಗುವುದುಂಟು. ಮಿತಿಮೀರಿದ ಮುದ್ದಿನಿಂದ ಬೆಳೆದ ಮಕ್ಕಳು ಮತ್ತು ಇದಕ್ಕೆ ವಿರುದ್ಧವಾಗಿ ಬಹಳೇ ತಿರಸ್ಕೃತರಾಗಿ ಬೆಳೆದ—ಯಾರಿಗೂ ಬೇಡಾದ, ಎಲ್ಲರಿಂದಲೂ ಬೈಗಳನ್ನು ತಿಂದ—ಮಕ್ಕಳು ಈ ವರ್ಗದಲ್ಲಿ ಸೇರುವರು. ಇವರ ಬಾಳು ಹಾಳಾಗುವುದಕ್ಕೂ ಇವರ ಚಿಕ್ಕಂದಿನ ಬಾಳಿನ ಮಾದರಿ ( ಆದರ್ಶವು ) ಆ ತೆರನಾಗಿ ಮಾರ್ಪಟ್ಟುದೇ ಮುಖ್ಯ ಕಾರಣವು. ಈ ಮೂರು ಬಗೆಯ ಮಕ್ಕಳ ಕುರಿತು ವಿವರವಾದ ವಿವೇಚನೆಯು ಮುಂದೆ ಬರುವುದು. ಇಂತಹ ಮಕ್ಕಳು ಕೆಲವೊಂದು ನ್ಯೂನತೆಗಳೊಂದಿಗೆ ಬೆಳೆಯುತ್ತಾರೆ. ತಮ್ಮ ನ್ಯೂನತೆಗಳ ಬಿಟ್ಟೂಬಿಡದ ಅರಿವಿನಿಂದ ಅವರು ಯಾವಾಗಲೂ ತಮ್ಮ ಮೇಲೆ ಆಘಾತ ಆಕ್ರಮಣಗಳು ಒದಗಬಹುದೆಂಬ ಅಂಜಿಕೆಯಲ್ಲಿಯೇ ಉಳಿಯುತ್ತಾರೆ. ಏಕೆಂದರೆ, ಅವರು ಬೆಳೆದುಬಂದ ಪರಿಸ್ಥಿತಿಗಳಲ್ಲಿ ಅವರು ಎಂದಿಗೂ ಸ್ವಾತಂತ್ರ್ಯವನ್ನಾಗಲೀ ಸ್ವಾವಲಂಬನವನ್ನಾಗಲೀ ಕಲಿತುಕೊಂಡಿರುವದಿಲ್ಲ.

**ಸಾಮಾಜಿಕ ಆಸಕ್ತಿಯ ಪ್ರಭಾವ.** ಪ್ರತಿಯೊಂದು ವ್ಯಕ್ತಿಯ ಸಾಮಾಜಿಕ ಆಸಕ್ತಿಯ ಬಗೆಗಳನ್ನು ಆರಂಭದಿಂದಲೂ ಅರಿತುಕೊಳ್ಳುವುದು ಅವಶ್ಯ. ಇಂಥ ಅರಿವು—ಸಾಮಾಜಿಕ ಅಭಿರುಚಿ ಆಸಕ್ತಿಗಳ ತಿಳುವಳಿಕೆಯು ವ್ಯಕ್ತಿ—ಮನೋವಿಜ್ಞಾನ ಪ್ರಣೀತವಾದ ಶಿಕ್ಷಣದ, ಚಿಕಿತ್ಸಾಕ್ರಮದ, ಮತ್ತು ವ್ಯಾಧಿ ನಿವಾರಣೆಯ ಮಹತ್ವದ ಅಂಗವಾಗಿದೆ. ಜೀವನವು ಸುಖ—ದುಃಖಗಳಿಂದ ಮಿಶ್ರವಾದ ಒಂದು ಅನುಗ್ರಹವಾಗಿದೆ. ಜೀವನದಲ್ಲಿ ಅನುಕೂಲ

ಪ್ರಯೋಜನಗಳೂ ಇವೆ; ಪ್ರತಿಕೂಲ ತೊಂದರೆಗಳೂ ಇವೆ. ಅನುಕೂಲಗಳಂತೆ ಪ್ರತಿಕೂಲ ಸಂಗತಿಗಳಿಂದಲೂ ಕೂಡಿಯೇ ಲಾಭವನ್ನು ಪಡೆವ, ತಮ್ಮ ಅನುಭವದ ಸಂಪತ್ತಿಯನ್ನು ಹೆಚ್ಚಿಸುವ ಜಾಣ್ಮೆಯನ್ನು ಹೊಂದುವವರೇ, ಪ್ರಪಂಚದಲ್ಲಿ ನಿರಾಯಾಸವಾಗಿ ಸಮರಸವಾಗಿ ಬಾಳುವಂಥವರೂ, ಆತ್ಮವಿಶ್ವಾಸವುಳ್ಳವರೂ ಧೈರ್ಯಶಾಲಿಗಳೂ ಆದ ಮಿಗಲಾದ ವ್ಯಕ್ತಿಗಳಾಗುತ್ತಾರೆ. ಅವರಿಗೆ ಭಯವೆಂಬುದಿಲ್ಲ. ಬಿಕ್ಕಟ್ಟು ಮುಗ್ಗಟ್ಟುಗಳಿರುವವೆಂಬುದನ್ನು ಬಲ್ಲರಾದರೂ, ಅವುಗಳನ್ನು ಏರಿಹೋಗಲೂ ಮೀರಿಸಾಗಲೂ ತಾವು ಸಮರ್ಥರೆಂಬುದನ್ನೂ ಕೂಡ ಅವರು ಅರಿತಿರುವರು. ಜೀವನದ ಎಲ್ಲ ಒಗಟುಗಳನ್ನು ಬಿಡಿಸಲು, ಎಲ್ಲ ಸಮಸ್ಯೆಗಳನ್ನು ಬಗೆಹರಿಸಲು ಅವರು ಸಿದ್ಧರಿರುತ್ತಾರೆ. ಇಂತಹ ಸಮಸ್ಯೆಗಳು ಬಹುಶಃ ಸಾಮಾಜಿಕ ಸಮಸ್ಯೆಗಳೇ ಇರುತ್ತವೆ. ಮಾನವತೆಯ ದೃಷ್ಟಿಯಿಂದ, ವ್ಯಕ್ತಿಯು ಸಾಮಾಜಿಕ ಜೀವನಕ್ಕಾಗಿ ಅಣಿಗೊಂಡಿರುವದು ಅವಶ್ಯವು. ಮೇಲೆ ಉಲ್ಲೇಖಿಸಿದ ಮೂರೂ ಮಾದರಿಯ ಮಕ್ಕಳು, ಅವಶ್ಯವಿರುವದಕ್ಕಿಂತ ಬಹಳ ಕಡಿಮೆ ಸಾಮಾಜಿಕ ಆಸಕ್ತಿ-ಅಭಿರುಚಿಗಳುಳ್ಳ ಬಾಳಿನ ಮಾದರಿಗಳನ್ನು ಬೆಳಸಿಕೊಂಡು ಬರುತ್ತವೆ. ಜೀವನದಲ್ಲಿ ಅವಶ್ಯವಿರುವ ಸಂಗತಿಗಳನ್ನು ಸಾಧಿಸುವದರ ಸಲುವಾಗಿಯೂ, ಅಲ್ಲಿ ತಲೆದೋರುವ ತೊಡಕು ತೊಂದರೆಗಳನ್ನು ಬಗೆಹರಿಸುವದರ ಸಲುವಾಗಿಯೂ, ಅನುಕೂಲವಿರುವ ಮನಸ್ಸಿನ ಒಲವನ್ನು ಅಥವಾ ಮನೋಧೋರಣೆಯನ್ನು ಅಂಥವರು ಪಡೆದಿರುವದಿಲ್ಲ. ಸೋಲಿನ ಭಾವನೆಯ ಮೂಲಕ ಅವರ ಬಾಳಿನ ಮಾದರಿಯು ಜೀವನದ ಸಮಸ್ಯೆಗಳ ಕುರಿತು, ಹದಗೆಟ್ಟು-ಹಾದಿಬಿಟ್ಟು-ಮಾನಸಿಕ ಘೋರಣೆಯನ್ನೂ ತೂಕ ತಪ್ಪಿದ ಒಲವನ್ನೂ ಉಂಟು ಮಾಡಿಕೊಳ್ಳುತ್ತದೆ. ಇದರ ಮೂಲಕ, ಅವರ ವ್ಯಕ್ತಿತ್ವವೆಲ್ಲ ಜೀವನದ ನಿರುಪಯೋಗಿಯಾದ ನಿಷ್ಪ್ರಯೋಜಕವಾದ ಬದಿಯಲ್ಲಿಯೇ ಬೆಳೆಯುವಂತೆ ಒತ್ತಾಯವಾಗುತ್ತದೆ. ಇಂತಹ ವ್ಯಾಧಿಗ್ರಸ್ತರನ್ನು-ಮನೋವಿಕೃತಿಗಳಿಂದ ಬಳಲುವ ಬೇನಿಗರನ್ನು-ಉಪಚರಿಸಿ ಗುಣಪಡಿಸುವಾಗ, ಅವರ ವಿಚಾರ ಮತ್ತು ವರ್ತನಗಳನ್ನು ಉಪಯೋಗಿಯಾದ ಪ್ರಯೋಜಕವಾದ ಬದಿಯಲ್ಲಿ ಬೆಳೆಯುವಂತೆ ಮಾಡಿ, ಜೀವನದ ಕುರಿತೂ, ಸಮಾಜದ ಕುರಿತೂ ಒಂದು ಸಾಮಾನ್ಯವಾದ ಸಾರ್ಥಕವಾಗಬಹುದಾದ ಮನೋವೃತ್ತಿಯನ್ನೂ ಉಪಯುಕ್ತ ಧೋರಣೆಯನ್ನೂ ಅವರಲ್ಲಿ ಹುಟ್ಟಿಸುವದೇ ಮುಖ್ಯ ಕರ್ತವ್ಯವಾಗಿರುತ್ತದೆ.

ಸಾಮಾಜ ಆಸಕ್ತಿ ಇಲ್ಲದಿರುವದೆಂದರೆ ಸಾಮಾಜಿಕ ಪ್ರವೃತ್ತಿಯ ಕೊರತೆ. ವ್ಯಕ್ತಿಯು ತನ್ನ ಜೀವನವನ್ನೆಲ್ಲ, ನಿರುಪಯುಕ್ತ ನಿಷ್ಪ್ರಯೋಜಕ ವಾಗಿಯೇ ಕಳೆದು ಅವನು ಜೀವನಕ್ಕೂ ಜಗತ್ತಿಗೂ ವಿಮುಖನಾದಂತೆಯೇ ಸರಿ. ಸಮಸ್ಯೆಗಳಾಗಿ ತೋರುವ ವಿಕೃತ ಮನಸ್ಸಿನ ಮಕ್ಕಳೂ, ಅಪರಾಧಿ ಗಳೂ ಉಪದ್ರವಿಗಳೂ ಆದ ಜನರೂ, ಸೆರೆಗುಡುಕ ತಲೆತಿರುಕ ಉನ್ಮತ್ತರೂ ಇಂಥವರ ಗುಂಪುಗಳು, ಸಾಮಾಜಿಕ ಆಸಕ್ತಿಯ ಕೊರತೆಯುಳ್ಳ ಜನಜಂಗುಳಿ ಗಳು ಇಂಥವರನ್ನು ಜೀವನದ ಪ್ರಯೋಜನಕಾರಿಯಾದ ಬದಿಗೆ ಹೊರಳು ವಂತೆ ಮಾಡಿ ಸಾಮಾಜಿಕ ಸಮಸ್ಯೆಗಳಲ್ಲೂ ವ್ಯಕ್ತಿಗಳಲ್ಲೂ ಅವರ ಆಸಕ್ತಿಯನ್ನು ಚೆನ್ನಾಗಿ ನೆಲೆಗೊಳಿಸಬೇಕೆಂಬುವದೇ ಮುಖ್ಯ ಸಮಸ್ಯೆಯಾಗಿದೆ. ಮತ್ತು ವ್ಯಕ್ತಿ ಮನೋವಿಜ್ಞಾನವು ಇದೇ ಕೆಲಸವನ್ನು ಕೈಗೊಂಡಿದೆ. ಈ ದೃಷ್ಟಿಯಿಂದ ಈ ವಿಜ್ಞಾನವು ಕೇವಲ ವ್ಯಕ್ತಿಯದೆ ಆಗಿರದೆ ನಿಜವಾಗಿಯೂ ಸಾಮಾಜಿಕತೆ ಯನ್ನು ಹೆಚ್ಚಿಸುವ ಸಮಾಜ ಮನೋವಿಜ್ಞಾನವಾಗಿದೆ.

**ಮಕ್ಕಳ ಲಾಲನೆ ಮತ್ತು ವ್ಯಕ್ತಿತ್ವದ ಭಾವನೆ.** ಸಾಮಾಜಿಕ ಆಸಕ್ತಿಯ ವಿಷಯದನಂತರ, ನಮ್ಮ ಮುಂದಿನ ಕೆಲಸವೆಂದರೆ, ವ್ಯಕ್ತಿಗೆ ಆತನ ಇಲ್ಲವೇ ಆಕೆಯ ಬೆಳವಣಿಗೆಯಲ್ಲಿ (ಜೀವನದ ವಿಕಾಸದಲ್ಲಿ) ಎದುರಿಸಬೇಕಾಗುವ ತೊಡಕು ತೊಂದರೆಗಳನ್ನು ಕಂಡು ಹಿಡಿಯುವದು. ಇದು ಗೊಂದಲಕ್ಕೀಡು ಮಾಡುವಂತಹದೆಂದು ಕಂಡರೂ, ನಿಜವಾಗಿಯೂ ಅಷ್ಟೇನು ಜಡವಾದ ಕಾರ್ಯವಲ್ಲ. ಮಿತಿಮೀರಿ ಮುದ್ದು ಗೈದು ಲಾಲಿಸಿ ಕೆಡಿಸಿದ ಪ್ರತಿಯೊಂದು ಶಿಶುವೂ, ಮುಂದೆ ನಿರುಪಯುಕ್ತ ಹುಡುಗನಾಗುತ್ತದೆ. ಇದಕ್ಕೆ ಇಂದಿನ ನಾಗರಿಕತೆಯೇ ಕಾರಣ. ಸಮಾಜ ವಾಗಲೀ, ಕುಟುಂಬವಾಗಲೀ, ಒಂದು ವ್ಯಕ್ತಿಯನ್ನು ಅಪರಿಮಿತವಾಗಿ ಏರಿಸಿ ಮುದ್ದು ಮಾಡಲು ಬಯಸಿದರೂ ಶಕ್ಯವಾಗದಿರುವಂತೆಯೇ ಇಂದಿನ ನಾಗರಿ ಕತೆಯ ರಚನೆಯಿದೆ. ಲಲ್ಲೆಗೆಯ್ದು ಮುದ್ದುಮಾಡಿ ಆರ್ತಿಯಿಂದ ಎಷ್ಟೇ ಬೆಳೆಸಿದ ಮಗುವಿಗೂ, ಜೀವನದ ಕಠಿಣವಾದ ಕರ್ಕಶವಾದ ಪ್ರಸಂಗಗಳನ್ನು ಎದುರಿಸಬೇಕಾದುದು ತಪ್ಪಿದ್ದಲ್ಲ. ಶಾಲೆಯನ್ನು ಸೇರಿದೊಡನೆಯೇ ಹೊಸ ದೊಂದು ಸಾಮಾಜಿಕ ಸಂಸ್ಥೆಯೂ ಅದರ ಹೊಸದಾದ ಸಾಮಾಜಿಕ ಸಮಸ್ಯೆ ಗಳೂ ಆತನ ಮುಂದೆ ನಿಲ್ಲುವುವು. ಆತನು ತನ್ನ ವರ್ಗದ ಸಂಗಡಿಗರೊಡನೆ

ಕೂಡಿ ಕಲೆತು ಕಲಿಯಲೂ, ಆಡಲೂ ಮನಸ್ಸು ಮಾಡುವುದಿಲ್ಲ. ಏಕೆಂದರೆ ಅದುವರೆಗಿನ ಆತನ ಬಾಲ್ಯದ ಅನುಭವವೆಲ್ಲ ಅಂಥ ವರ್ತನಕ್ಕೆ ವಿರುದ್ಧವಾಗಿ ಬಂದಿದೆ. ಶಾಲೆಯು ಸಾಮುದಾಯಿಕ ಜೀವನಕ್ಕಾಗಿ ಆತನು ಸಿದ್ಧನಾಗಿರುವುದಿಲ್ಲ ಆತನ ಬಾಳಿನ ಮಾದರಿಯು ಮಾರ್ಪಡುವ ಸಮಯದಲ್ಲಿ ಆತನಿಗೆ ಬಂದ ಅನುಭವದ ಮೂಲಕ ಅಂಥ ಸಾಮುದಾಯಿಕ ಸನ್ನಿವೇಶಗಳ ಕುರಿತು ಆತನಲ್ಲಿ ಭೀತಿ ಉಂಟಾಗಿರುತ್ತದೆ. ಮಕ್ಕಳ ಗುಂಪಿನಲ್ಲಿ ಕೂಡಿ ನಡೆಯಲು ಆತನು ಅಂಜುತ್ತಾನೆ. ಇನ್ನೂ ಹೆಚ್ಚು ಮುದ್ದು ಮಾಡಿಸಿಕೊಳ್ಳಬೇಕೆಂಬ ಹಂಬಲವೇ ಆತನಿಗೆ ಇರುತ್ತದೆ. ಆದರೆ ಇವೆಲ್ಲ ಲಕ್ಷಣಗಳು ಆತನ ಆನುವಂಶಿಕ ಸಂಸ್ಕಾರಗಳಲ್ಲ. ಆತನ ಬಾಳಿನ ಮಾದರಿಯನ್ನೂ ಅದರಿಂದ ಆತನಿಗೆ ಹಾದಿತೋರಿಸುವ ಗುರಿಯನ್ನೂ ಅವಲೋಕಿಸಿದರೆ ಆತನ ವರ್ತನದ ಲಕ್ಷಣಗಳನ್ನೆಲ್ಲ ನಾವು ತಿಳಿದುಕೊಳ್ಳಬಹುದಾಗಿದೆ. ತನ್ನದೇ ಬಾಳಿನ ಗುರಿಯ ನಿಟ್ಟಿನಲ್ಲಿ ನಡೆಯಲು ಅನುಕೂಲವಾಗುವಂತೆ ಕೆಲವೊಂದು ಗುಣಗಳನ್ನೂ, ವಿಶಿಷ್ಟ ಲಕ್ಷಣಗಳನ್ನೂ ಆತನು ಬೆಳಿಸಿಕೊಂಡಿರುವವರೆಗೆ, ಆತನಿಗೆ ಬೇರೊಂದು ದಿಶೆಯಲ್ಲಿ ಒಯ್ಯಬಹುದಾದಂಥ ಲಕ್ಷಣಗಳನ್ನು ಪಡೆಯುವುದು ಆತನಿಂದ ಶಕ್ಯವಿಲ್ಲ.

ಬಾಳಿನ ಗುಟ್ಟನ್ನು ಅರಿಯುವುದಕ್ಕೆ ನಮ್ಮ ಎನಿಕೆಗಳನ್ನು ( ಭಾವನೆಗಳನ್ನು ) ಅಭ್ಯಾಸಿಸುವುದು ಅವಶ್ಯ. ಒಂದು ವ್ಯಕ್ತಿಯ ಜೀವನಾದರ್ಶದಿಂದ ನಿಶ್ಚಿತವಾದ ಬೆಳವಣಿಗೆಯ ರೀತಿಯೇ ವ್ಯಕ್ತಿಯ ಸ್ವಭಾವಧರ್ಮ. ಈ ಸ್ವಭಾವಧರ್ಮವೇ ಆ ವ್ಯಕ್ತಿಯ ಎಲ್ಲ ಶಾರೀರಿಕ ಹಾಗೂ ಮಾನಸಿಕ ಚಟುವಟಿಕೆಗಳಂತೆ ಅವನ ಭಾವನೆಗಳ ಜೀವನವನ್ನೂ ಆಳುತ್ತದೆ. ವ್ಯಕ್ತಿಗಳು ಯಾವಾಗಲೂ ತಾವು ಇಟ್ಟುಕೊಂಡ ಮಾನಸಿಕ ಧೋರಣೆಗಳನ್ನು ಭಾವನೆಗಳಿಂದ ಸಮರ್ಥಿಸುತ್ತಾರೆ. ಇದೊಂದು ಸೋಜಿಗದ ಮಾತು. ಒರ್ವ ಮನುಷ್ಯನು ಸತ್ಕಾರ್ಯವನ್ನು ಮಾಡಬೇಕೆಂದು ಸಂಕಲ್ಪಿಸಿದ್ದರೆ, ಆ ಕಲ್ಪನೆಯು ಆತನ ಎಲ್ಲ ಭಾವನಾ ಪ್ರಪಂಚವನ್ನು ವಿಶಾಲವಾಗಿ ವ್ಯಾಪಿಸಿ ಪ್ರಭಾವ ಬೀರುತ್ತದೆ. ವ್ಯಕ್ತಿಯ ಭಾವನೆಗಳು ಯಾವಾಗಲೂ ಆತನು ತನ್ನ ಕಾರ್ಯದ ಕುರಿತು ಬೆಳಿಸಿಕೊಂಡ ದೃಷ್ಟಿಕೋನಕ್ಕೆ ಪೋಷಕ ಅಥವಾ ಪೂರಕವಾಗುವಂತೆಯೇ ಇರುತ್ತವೆ. ವ್ಯಕ್ತಿಯ ನಿಶ್ಚಿತವಾದ ಕಾರ್ಯ ಪ್ರವೃತ್ತಿಯ

ಒಲವನ್ನೇ ಬಹುಶಃ ಭಾವನೆಗಳೂ ಭದ್ರಪಡಿಸುತ್ತವೆ. ಭಾವನೆಗಳಿಲ್ಲದಿದ್ದರೂ ನಾವು ಮಾಡಬಯಸುವದನ್ನು ಮಾಡಿಯೇ ತೀರುವೆವು. ಭಾವನೆಗಳು ಬರೇ ನಮ್ಮ ಕೃತ್ಯಗಳಿಗೆ ಸಹಚಾರಿಗಳು.

**ಕನಸುಗಳ ತಿರುಳು** ಈ ಸಂಗತಿಯು ನಮ್ಮ ಕನಸುಗಳಲ್ಲಿ ಸ್ಪಷ್ಟವಾಗುತ್ತದೆ: ಕನಸುಗಳ ಕಾರ್ಯ, ಉಪಪತ್ತಿಗಳನ್ನು ಹುಡುಕುವುದು ವ್ಯಕ್ತಿ-ಮನೋವಿಜ್ಞಾನದ ಇತ್ತೀಚೆಯ ತೀರ ಹೊಸ ಸಾಧನೆಯು. ಪ್ರತಿಯೊಂದು ಕನಸಿನ ಒಂದು ಉದ್ದೇಶವಿರುತ್ತದೆ ಆದರೆ ಇದನ್ನು ಇಂದಿನಷ್ಟು ಹಿಂದೆಂದಿಗೂ ಮನಗಂಡಿದ್ದಿಲ್ಲ. ಕೆಲವೊಂದು ಭಾವನೆಗೆ ಚಾಲನೆಯನ್ನು ಕೊಡುವುದೇ ಕನಸಿನ ಉದ್ದೇಶ. ಈ ಭಾವನೆಯು ಕೆಲಸಾರೆ ಸ್ಪಷ್ಟವಾಗಿ ಹೊರಬರಬಹುದು. ಕೆಲಬಾರಿ ಒಳಗೊಳಗೇ ಹುದುಗಿಕೊಂಡಿದ್ದು ಕಾಣದಿರಬಹುದು. ಈ ಭಾವನೆಯ ಸಂಚಾಲನೆಯಿಂದ ನಮಗೆ ಕನಸು ಕಾಣಿಸಿಕೊಳ್ಳುತ್ತದೆ. ಕನಸೆಂದರೆ ಹುಸಿ; ಮೋಸ; ಭ್ರಾಮಕವಂಚನೆ; ಎಂದು ತಿಳಿವ ಹಳೇಕಲ್ಪನೆಗೆ ಇದೊಳ್ಳೇ ಏಟು ಬಿದ್ದಂತೆ ಆಗಿದೆ. ಹಗಲಿನ ನಮ್ಮ ಬಯಕೆಗಳು ಇರುಳಿನಲ್ಲಿ ನಮ್ಮ ಕನಸುಗಳಾಗುವುವು. ಅಥವಾ ನಾವು ಕೈಕೊಳ್ಳಬೇಕೆಂದಿರುವ ಯೋಜನೆ, ಧೋರಣೆಗಳ ಭಾವನಾಮಯ ಸ್ವರೂಪವೇ ಕನಸುಗಳು. ಅವು ನಾಟಕದ ಮುಂಚಿನ "ರಂಗತಾಲೀಮು." ಆದರೆ ತಾಲೀಮಿಗೂ ಇದಕ್ಕೂ ಸ್ವಲ್ಪ ವ್ಯತ್ಯಾಸವಿದೆ; ನಾಟಕಕ್ಕೂ ರಂಗತಾಲೀಮಿಗೂ ಹುರುಳಿನಲ್ಲಿ ವ್ಯತ್ಯಾಸವಿಲ್ಲ. ಆದರೆ ಜಾಗೃತ ಕಾಲದ ವರ್ತನದ ನಿಜವಾದ ಆಟವು ಕನಸಿನಲ್ಲಿ ಬಾರದೇ ಇದ್ದರೂ ಅದನ್ನು ಹೋಲುವ ಚಟುವಟಿಕೆಗಳು ಮಾತ್ರ ಕನಸಿನಲ್ಲಿ ಬರಬಹುದು ಈ ದೃಷ್ಟಿಯಿಂದ ಕನಸುಗಳು ಕೃತಿಯ ಛಾಯೆ! ವಂಚನೆ! ಕನಸಿನೊಳಗಿನ ಭಾವನಾಮಯ ಕಲ್ಪನಾವಿಲಾಸವು ಕೃತಿಯನ್ನು ಮಾಡದೆಯೇ ನಮಗೆ ಕೃತಿಯ ತೃಪ್ತಿಯ ಭ್ರಾಂತಿಯನ್ನು ಈಯುವುದು!

**ಸ್ತ್ರೀದ್ವೇಷ, ಪುರುಷದ್ವೇಷದ ಉಗಮ.** ಕನಸುಗಳ ಈ ಲಕ್ಷಣವು ನಮ್ಮ ಎಚ್ಚರದ ಬಾಳಿನಲ್ಲಿಯೂ ಕಂಡುಬರುತ್ತದೆ. ಭಾವನಾಮಯವಾದ ವಿಚಾರಗಳಿಂದ ಆತ್ಮ ವಂಚನೆ ಮಾಡಿಕೊಳ್ಳುವದರಲ್ಲಿ ಜನಸಾಮಾನ್ಯರಿಗೆ ವಿಶೇಷ ಪ್ರೀತಿ. ನಮ್ಮ ನಾಲ್ಕನೆಯ ಇಲ್ಲವೆ ಐದನೆಯ ವರ್ಷದ ವಯಸ್ಸಿನಲ್ಲಿ ರೂಪಗೊಂಡ ಬಾಳಿನ ಮಾದರಿಗಳ ದಾರಿಗುಂಟ ತೇಲುತ್ತ ಹೋಗುವುದರ

ಕಡೆಗೇ ತುಂಬಾ ನಮ್ಮ ಒಲವು. ಹೀಗೆ ಮಾಡಲು ಯಾವಾಗಲೂ ನಾವೇ ನಮ್ಮ ಮನಸ್ಸೊಲಿಸಿಕೊಳ್ಳುತ್ತಿರುತ್ತೇವೆ! ಮೇಲೆ ಹೇಳಿದಂತೆ ಪ್ರತಿಯೊಂದು ವ್ಯಕ್ತಿಯ ಬಾಳಿನ ಮಾದರಿಯು ಬಾಲ್ಯದಲ್ಲಿ ನಾಲ್ಕೈದು ವರ್ಷ ವಯಸ್ಸಿಗೇ ರೂಪಗೊಳ್ಳುವದಷ್ಟೇ. ಆದುದರಿಂದ ಆಗಿನ ಅವಸ್ಥೆಯಲ್ಲಿ ಮಗುವಿನ ಮನಸ್ಸಿನ ಮೇಲೆ ಆಗತಕ್ಕಂಥ ಪರಿಣಾಮಗಳನ್ನೂ ಸಂಸ್ಕಾರಗಳನ್ನೂ ನಾವು ಪರಿಶೀಲಿಸಬೇಕಾಗುವುದು. ಅಂದಿನ ಇಂತಹ ಪರಿಣಾಮಗಳು ಬಹಳೇ ವಿವಿಧವಾಗಿರಬಹುದು ನಮ್ಮ ಸಾಮಾನ್ಯ ಪ್ರೌಢದೃಷ್ಟಿಯಿಂದ ಕಲ್ಪಿಸಿದ್ದಕ್ಕಿಂತ ಹೆಚ್ಚು ವಿವಿಧವಾಗಿರಬಹುದು. ಶಿಶುವಿನ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಮೂಡುವ ಸರ್ವ ಸಾಧಾರಣವಾದ ಸಂಗತಿಗಳಲ್ಲಿ ಅತ್ಯಂತ ಸಾಮಾನ್ಯವಾದುದೆಂದರೆ, ತಾಯಿತಂದೆಗಳ ಮಿತಿಮೀರಿದ ದಂಡನೆ ದೂಷಣೆಗಳಿಂದ ಒದಗುವ ಭಾವನೆಗಳನ್ನು ಬಚ್ಚಿಡುವುದು. ತಂದೆತಾಯಿಗಳ ಈ ಬಗೆಯ ಕಾಟದಿಂದ ಪಾರಾಗಲು ಮಗುವು ಅವರೆದುರು ಸುಮ್ಮನೆ ಇದ್ದಂತೆ ತೋರಿಸಿಕೊಳ್ಳಲು ಹವಣಿಸುತ್ತದೆ. ಮತ್ತು ಹೀಗೆ ಹತ್ತಿಕ್ಕಿದ ಮನೋಭಾವಗಳನ್ನು ಎಲ್ಲಿಯಾದರೂ ಒಂದೆಡೆಯಲ್ಲಿ ಬಿಚ್ಚಲು ಹವಣಿಸುತ್ತದೆ. ಇದರ ಪರಿಣಾಮವಾಗಿಯೇ ಕೆಲವೊಮ್ಮೆ ಏಕಾಂತ ಪ್ರೀತಿಯು ಅವರಲ್ಲಿ ತಲೆದೋರುವುದು. ಕೆಲವು ಹುಡುಗರು ಉಗ್ರ ಮನೋವೃತ್ತಿಯ ತಂದೆಗಳ ಸಾನ್ನಿಧ್ಯದ ಪರಿಣಾಮವಾಗಿ, (ಗಂಡಸರೆಲ್ಲರೂ ಉಗ್ರ ಮನೋವೃತ್ತಿಯವರಿರಬಹುದೆಂಬ ಭಾವನೆಯಿಂದ) ಅವರಿಂದ ದೂರವಾಗಿ ಇರಬೇಕೆಂಬ ಪ್ರವೃತ್ತಿಯುಳ್ಳ ಬಾಳಿನ ಮಾದರಿಗಳನ್ನು ಉಂಟುಮಾಡಿಕೊಳ್ಳುತ್ತಾರೆ. ಅಥವಾ, ಕಠೋರ ವೃತ್ತಿಯ ತಾಯಂದಿರಿಂದ ಆನಂದಕ್ಕೆ ಎರವಾದ ಹುಡುಗರು ಹೆಂಗಸರಿಂದಲೇ ದೂರ ಉಳಿಯುವ ಪ್ರವೃತ್ತಿಯನ್ನು ಬೆಳಸಿಕೊಳ್ಳುವುದುಂಟು. ಈ ದೂರ ಸರಿಯುವ ಏಕಾಂತ ಪ್ರಿಯ ಪ್ರವೃತ್ತಿಯು ಹಲವು ವಿಧವಾಗಿ ವ್ಯಕ್ತವಾಗುವುದು, ಉದಾಹರಣಾರ್ಥವಾಗಿ, ಮಗುವು ತುಂಬ ನಾಚಿಕೆಬುರುಕವಾಗಬಹುದು. ಇಲ್ಲವೇ, ಸೃಷ್ಟಿಕ್ರಮಕ್ಕೆ ವಿರುದ್ಧವಾದ ಲೈಂಗಿಕ ವಿಕೃತಿಯನ್ನು ಕೂಡ ಹೊಂದಬಹುದು. (ಹೆಂಗಸರ ಮೇಲೆ ಸೇಡು ತೀರಿಸಿಕೊಳ್ಳಲು ಇದೊಂದು ಅಡ್ಡದಾರಿ.) ಇಂತಹ ವಿಕೃತಿಗಳು ತಳಿಯಿಂದ ಬಂದವಂಥವಲ್ಲ. ಮಗುವಿನ ಮಾರ್ಪಡುವ ವಯಸ್ಸಿನಲ್ಲಿ ಸುತ್ತಲಿರುವ ಪರಿಸ್ಥಿತಿಯಿಂದಲೇ ತಲೆದೋರಿದಂತಹವು.

ಹೀಗೆ ಶಿಶುವಿನ ಮೊದಲಿನ ತಪ್ಪುಗಳು ನಿಜವಾಗಿಯೂ ಬಹಳೇ ದೂರದವರೆಗೆ ಪರಿಣಾಮ ಮಾಡುವಂತಹವುಗಳಾಗಿವೆ. ಇವುಗಳ ಪರಿಣಾಮವಾಗಿ ಮುಂದಿನ ಬಾಳುವೆಯ ದಿಕ್ಕೇ ಬದಲಾಗಬಹುದು. ವಸ್ತುಸ್ಥಿತಿಯು ಹೀಗಿದ್ದರೂ ಜನಗಳು ತಮ್ಮ ಮಕ್ಕಳ ಜೀವನವನ್ನು ಕುರಿತು ದಿನಾಲು ಏನಾದರೂ ವಿಚಾರ ಮಾಡುವರೆ ? ಮಗುವಿನ ಬಾಳನ್ನು ಸರಿಯಾದ ದಾರಿಗಾಣಿಸಲು ಸ್ವಲ್ಪವಾದರೂ ಪರಿಶ್ರಮಪಡುವರೆ ? ಮಕ್ಕಳ ಮನಸ್ಸಿನ ಒಲವುಗಳನ್ನು ಅದು ಇರುವ ಮತ್ತು ಬೆಳೆವ ಬಗೆಯನ್ನೂ ಅರಿತ ತಂದೆತಾಯಿಗಳೆಷ್ಟು ? ತಮ್ಮ ಇಲ್ಲವೆ ಮಕ್ಕಳ ಅನುಭವಗಳನ್ನು ಪುನರಾಲೋಚಿಸಿ ಅದರ ಪರಿಣಾಮಗಳನ್ನು ತಿಳಿದುಕೊಳ್ಳಲಿಕ್ಕಾಗಲಿ ತಿಳಿಸಿ ಹೇಳಲಿಕ್ಕಾಗಲಿ ಸಮರ್ಥರಾದ ಹಿರಿಯರು—ತಾಯಿತಂದೆಗಳೆಷ್ಟು ? ಹೀಗಿರುವದರಿಂದ ಮಗುವು ಪ್ರವಾಹ ಪತಿತ ಕಟ್ಟಿಗೆಯ ತುಂಡಿನಂತೆ ತನ್ನದೇ ದಾರಿಯಲ್ಲಿ ಮುಂದರಿಯಬೇಕಾಗುತ್ತದೆ.

**ಅಣ್ಣನು ಎಬಡನೇಕೆ ? ಹೆಣ್ಣು ಪುಕ್ಕಿ ಏಕೆ ?**

ಸೋಜಿಗದ ಸಂಗತಿಯೇನೆಂದರೆ, ಯಾವುದೇ ಎರಡು ಮಕ್ಕಳು ಒಂದೇ ಕುಟುಂಬದಲ್ಲಿ ಹುಟ್ಟಿದ್ದರೂ, ಒಂದೇ ಸನ್ನಿವೇಶದಲ್ಲಿ ಬೆಳೆಯುವುದಿಲ್ಲ. ಒಂದೇ ಕುಟುಂಬದಲ್ಲಿ ಕೂಡ, ಪ್ರತಿಯೊಂದು ಶಿಶುವಿನ ಸುತ್ತಲೂ ಇರುವ ವಾತಾವರಣವು ಬೇರೆಯಾಗಿರುತ್ತದೆ. ಹೀಗೆ ಮೊದಲಿನ ಶಿಶುವಿನ ಸನ್ನಿವೇಶಗಳ ಪರಿಘವು ಮುಂದೆ ಹುಟ್ಟುವ ಇತರ ಮಕ್ಕಳ ಪರಿಸ್ಥಿತಿಯಿಂದ ತೀರ ಭಿನ್ನವಾಗಿರುತ್ತದೆ. ವಿಷಮ ಪರಿಣಾಮ ಮಾಡುವಷ್ಟು ಬೇರೆಯಾಗಿರುತ್ತದೆ. ಮೊದಲನೆಯ ಶಿಶುವು ಆರಂಭದಲ್ಲಿ ಒಬ್ಬೊಂಟಿಗವಾಗಿರುತ್ತದೆ. ಅದ್ದರಿಂದ ಅದು ಕುಟುಂಬದ ಎಲ್ಲ ಜನಗಳ ಆಸಕ್ತಿ ಆಕರ್ಷಣಗಳ ಕೇಂದ್ರ ಬಿಂದುವಾಗುತ್ತದೆ. ಅಳ್ತಿ (ಅಚ್ಛೆ) ಯಿಂದ ಬೆಳೆಯುತ್ತದೆ. ಆದರೆ ಒಮ್ಮೆ ಎರಡನೇ ಶಿಶುವು ಹುಟ್ಟಿದೊಡನೆಯೆ ಮೊದಲನೆಯದರ ಅಳ್ತಿ ಆಕ್ಕರವು ಕಡಿಮೆಯಾಗುವುದು ಎಲ್ಲರೂ ಅದನ್ನು ದುರ್ಲಕ್ಷಿಸುವರು. ಇಂತಹ ಸ್ಥಿತ್ಯಂತರವು ಆ ಮಗುವಿಗೆ ಸ್ವಲ್ಪವೂ ಸೇರುವುದಿಲ್ಲ. ಇಷ್ಟೇ ಅಲ್ಲ, ತಾನು ಒಮ್ಮೆ ಅಧಿಕಾರಸ್ಥಾನದಲ್ಲಿದ್ದು ಆಕರ್ಷಣ ಆಸಕ್ತಿಗಳ ಕೇಂದ್ರವಾಗಿದ್ದು ಈಗ ತನ್ನನ್ನು ಯಾರೂ ಕೇಳುವುದಿಲ್ಲವೆಂಬುದನ್ನು ನೋಡಿ ಆ ಮಗುವು ಒಳಗೊಳಗೇ ಸಿಡಿಮಿಡಿ

ಗೊಳ್ಳುವುದು, ಮನಸಿನ ಮೇಲೆ ತುಂಬ ಪರಿಣಾಮ ಮಾಡಿಕೊಳ್ಳುವುದು. ಖೇದದ ಭಾವನೆಯು–ದುರಂತದ ಈ ಎನಿಕೆಯು ಆತನಲ್ಲಿ ರೂಪಗೊಳ್ಳುತ್ತಿರುವ ಬಾಳಿನ ಮಾದರಿಯ ಮೇಲೆ ಪರಿಣಾಮ ಮಾಡುತ್ತದೆ. ಮತ್ತು ಮುಂದೆ ಪ್ರೌಢ ವಯಸ್ಸಿನಲ್ಲಿ ಆ ಪರಿಣಾಮವು ಚೆನ್ನಾಗಿ ಮೇಲೆದ್ದು ಬರುತ್ತದೆ. ಒಳಗೊಳಗೇ ಉರಿದು ಕಸಿವಿಸಿಪಟ್ಟು ಮನಸ್ಸಿನ ಹದಗೆಡಿಸಿಕೊಂಡ ಈ ಬಗೆಯ ಹಿರಿಯ ಮಕ್ಕಳು ದೊಡ್ಡವರಾದ ಮೇಲೆ ತಮ್ಮ ಜೀವನದಲ್ಲಿ ಅಪಯಶಸ್ವಿಗಳೂ, ನಿರ್ಭಾಗ್ಯರೂ ಆದುದು ಕಂಡು ಬರುತ್ತದೆ.

ಇದರಂತೆಯೇ ಹುಡುಗ ಮತ್ತು ಹುಡುಗೆಯನ್ನು ನಡೆಸಿಕೊಂಬಲ್ಲಿ ತಂದೆ ತಾಯಿಗಳು ತೋರುವ ತಾರತಮ್ಯ–ವಿಷಮತೆಯ ದುಷ್ಪರಿಣಾಮಗಳೂ ಹೆಣ್ಣು ಮಕ್ಕಳ ಮನಸ್ಸಿನ ಮೇಲೆ ಬಹಳ ವಿಪರೀತವಾಗುತ್ತವೆ ಹುಡುಗರಿಗೆ ಅಟ್ಟಕ್ಕೆ ಏರಿಸುವುದು. ಬೇಡಿದ ಅನುಕೂಲ ಕೊಡುವುದು; ಮತ್ತು ಹುಡುಗೆಯರಿಗೆ ಏನೊಂದನ್ನೂ ಕೊಡುವಂತಿಲ್ಲ. ಹೆಣ್ಣು ಹುಟ್ಟಿದ್ದು ಒಂದು ಹುಣ್ಣು ಹುಟ್ಟಿದ ಹಾಗೆ ಎಂದು ಅವರನ್ನು ನಡೆಸಿಕೊಳ್ಳುವುದು ! ಆದುದರಿಂದ ಹುಡುಗೆಯರು ಯಾವಾಗಲೂ ಅಳ್ಳೆದೆಯರೂ ಹಿಂಜರಿಯುವಂತಹರೂ ಸಂದಿಗ್ಧ, ಸಾಶಂಕ ವೃತ್ತಿಯವರಾಗಿ ಆಗುವರು. ಮುಂದಿನ ಜೀವನದಲ್ಲೆಲ್ಲ ಅವರು ಮಿತಿಮೀರಿದ ಸಂಕೋಚ ವೃತ್ತಿಯವರಾಗಿ ಯಾವಾಗಲೂ ಮುದುಡಿಕೊಂಡೇ ಇರುವರು. ಆತ್ಮ ವಿಶ್ವಾಸವೆಲ್ಲ ನಷ್ಟವಾಗಿ ಪುಕ್ಕರು ಭೀರುಗಳಾಗುವರು. ಗಂಡಸರೇ ನಿಜವಾಗಿಯೂ ಎಲ್ಲವನ್ನು ಸಾಧಿಸಲು ಸಮರ್ಥರಿರುವರೆಂಬ ಮನೋಭಾವದಲ್ಲಿಯೇ ಅವರು ಉಳಿಯುವರು.

ಎರಡನೆಯ ಮಗುವಿನ ಪರಿಸ್ಥಿತಿಯು ಮೊದಲನೆಯದಕ್ಕಿಂತ ತೀರ ಬೇರೆಯಾಗಿರುತ್ತದೆ. ಏಕೆಂದರೆ ಈತನಿಗೆ ಆರಂಭದಿಂದಲೂ ಒಂದು ಸ್ಪರ್ಧೆಯಲ್ಲಿ ನಿಲ್ಲಬೇಕಾಗುತ್ತದೆ. ಇವನಿಗೆ ಹಿಂದಿಕ್ಕಿ ತಾನು ಮುಂದುವರಿಯಲು ಹವಣಿಸುವ, ಹೆಣಗುವ ಅಣ್ಣನು ಇವನ ಪ್ರತಿ ಸ್ಪರ್ಧಿಯಾಗಿ ಯಾವಾಗಲೂ ಸಿದ್ಧನಿರುತ್ತಾನೆ. ವಾಡಿಕೆಯಾಗಿ, ಎರಡನೆಯ ಮಗುವು ಹಿರಿಯವನನ್ನು ಸ್ಪರ್ಧೆಯಲ್ಲಿ ಮೀರುತ್ತಾನೆ. ಇದರ ಕಾರಣವೇನೆಂದರೆ, ತನ್ನ ಬೆನ್ನಲಿ ಬಂದವನೊಬ್ಬನು (ತಮ್ಮನು) ತನ್ನೊಡನೆ ಸ್ಪರ್ಧೆಗೆ ನಿಂತು ಸರಿಗಟ್ಟಲು ಅಣಿಯಾಗಿರುವನೆಂಬ ನೆನಹು ಮೊದಲನೆಯ ಮಗುವನ್ನು (ಅಣ್ಣನನ್ನು) ಸದಾ ಬಾಧಿಸು

